# ಪ್ರಯಾಗಯೋಗ

"ಅಪ್ರಾಪ್ತಸ್ಯ ಪ್ರಾಪ್ತಿಃ ಯೋಗಃ". ಎಂದರೆ ಈವರೆಗೂ ಪಡೆಯದೇ ಇದ್ದುದನ್ನು ಪಡೆಯುವುದು ಯೋಗ. ಪ್ರಯಾಗದರ್ಶನವನ್ನು ಈವರೆಗೂ ಪಡೆಯದೇ ಇದ್ದುದರಿಂದ ಪ್ರಯಾಗದರ್ಶನ ಪ್ರಾಪ್ತವಾದದ್ದು ನನ್ನ ಯೋಗ. ಅಲ್ಲದೇ ಯೋಗಶಬ್ದಕ್ಕೆ ಭಾಗ್ಯ ಎಂಬ ರೂಢಾರ್ಥವೂ ಇದೆ. ತ್ರಿವೇಣೀಸಂಗಮದ ಪುಣ್ಯಸ್ಥಾನದಲ್ಲಿ ವಾಸಿಸುವ ಅವಕಾಶ ದೊರಕಿದ್ದೂ ಯೋಗ(ಭಾಗ್ಯ). ಈ ಪ್ರಯಾಗಯೋಗವನ್ನು ಅಕ್ಷರರೂಪಕ್ಕಿಳಿಸುವ ಸಂಕಲ್ಪ ಸಿದ್ಧಿಸಿದ್ದಂತೂ ಮಹಾಯೋಗ.

ಪ್ರಯಾಗದ ಪುಣ್ಯಭೂಮಿಯಲ್ಲಿ ಆರು ತಿಂಗಳುಗಳ ಕಾಲ ವಿದ್ಯಾವಾರಿಧಿಯ ಷಾಣ್ಮಾಸಿಕ ಪಾಠ್ಯಕ್ರಮ(ಕೋರ್ಸ್ ವರ್ಕ್) ನಡೆಯಿತು. ನಮ್ಮ ಊರಿನಿಂದ ಸುಮಾರು ೨೦೦೦ ಕಿಮೀ ದೂರದಲ್ಲಿರುವ ಪ್ರಯಾಗದಲ್ಲಿ ಕೋರ್ಸ್ ವರ್ಕ್ ಇರುವುದರಿಂದ ಅನುಭವಗಳು ಖಂಡಿತವಾಗಿ ವಿಶಿಷ್ಟವಾಗಿರುತ್ತವೆ ಎಂದು ಹೊರಡುವ ಮೊದಲೇ ಯೋಚಿಸಿದ್ದೆ. ಆದ್ದರಿಂದ ಆ ವಿಶಿಷ್ಟ ಅನುಭವಗಳನ್ನು ಬರೆದಿಡಬೇಕು ಎಂಬ ಆಸೆಯೂ ಮನಸ್ಸಿನಲ್ಲಿತ್ತು. ಆದರೆ ಅನೇಕ ಸಂಕಲ್ಪಗಳು ಸಂಕಲ್ಪವಾಗಿಯೇ ಕೊನೆಗೊಂಡ ಅನುಭವಗಳು ಅನೇಕ ಬಾರಿ ಆಗಿದ್ದರಿಂದ ತುಸು ದೃಢವಾಗಿಯೇ ಬರೆಯುವ ಸಂಕಲ್ಪ ಮಾಡಿದೆ. ಸಂಕಲ್ಪದಂತೆಯೇ ವಿಶಿಷ್ಟ ಅನುಭವಗಳನ್ನು ದಾಖಲಿಸುತ್ತಿದ್ದೆ. ಪ್ರಯಾಗದಲ್ಲಿ ನಾನು ಅಧ್ಯಯನ ನಡೆನುತ್ತಿದ್ದ ಸಂಸ್ಕೃತಗಂಗಾ ಎಂಬ ಲೈಬ್ರರಿಯಲ್ಲಿನ ಫಲಕವೊಂದರಲ್ಲಿ 'ಪಢನೇ ಯೋಗ್ಯ ಲಿಖಾ ಜಾಯೇ, ಇಸಸೇ ಲಾಖ್ ಗುನಾ ಬೆಹೆತರ್ ಯೇ ಹೈ ಕಿ, ಲಿಖನಾ ಯೋಗ್ಯ ಕಿಯೇ ಜಾಯೇ' (ಓದಲು ಯೋಗ್ಯವಾದುದನ್ನು ಬರೆಯಬೇಕು. ಇದಕ್ಕಿಂತಲೂ ಲಕ್ಷ ಪಟ್ಟು ಉತ್ತಮವಾದುದೆಂದರೆ, ಬರೆಯಲು ಯೋಗ್ಯವಾದುದನ್ನು ಮಾಡಬೇಕು) ಎಂದು ಬರೆದಿತ್ತು. ಇದರಿಂದಾಗಿ ನಾನು ಬರೆಯಲು

ಯೋಗ್ಯವಾದುದನ್ನು ಮಾಡುತ್ತಿಲ್ಲ. ಆದರೂ ಬರೆಯುತ್ತಿದ್ದೇನೆ ಎಂಬ ದುಗುಡ ನನ್ನನ್ನು ಕಾಡುತ್ತಿತ್ತು. ಆದರೆ ಬರೆಯಲು ಅಯೋಗ್ಯವಾದುದನ್ನು ಮಾಡುತ್ತಿಲ್ಲ ಎಂಬ ಸಮಾಧಾನದೊಂದಿಗೆ ಬರವಣಿಗೆಯನ್ನು ಆರಂಭಿಸಿದೆ.

ಪ್ರಯಾಗದಲ್ಲಿ ವಿದ್ಯಾವಾರಿಧಿಯ ತರಗತಿಗಳು ಆರು ತಿಂಗಳುಗಳ ಕಾಲ ನಡೆದುದರಿಂದ ತರಗತಿಗಳಲ್ಲೂ ಕೂಡಾ ಅನೇಕ ವಿಶಿಷ್ಟ ಘಟನೆಗಳನ್ನು ಅನುಭವಿಸಿದ್ದರೂ ಅವುಗಳೆಲ್ಲ ಅನುಭವೈಕವೇದ್ಯ ಹಾಗೂ ಅವರ್ಣನೀಯವಾಗಿದ್ದರಿಂದ ಆ ಘಟನೆಗಳನ್ನು ಉಲ್ಲೇಖಿಸಿಲ್ಲ. ಪ್ರಯಾಗ ಜೀವನದ ವೈಯಕ್ತಿಕ ಅನುಭವಗಳಲ್ಲಿ ಯಾವುದಾದರೂ ವಿಶೇಷತೆಗಳು ಕಂಡುಬಂದರೆ ಇಲ್ಲಿ ಹಂಚಿಕೊಂಡಿದ್ದೇನೆ. ಅನೇಕ ಪ್ರೇಕ್ಷಣೀಯ ಸ್ಥಳಗಳ ಬಗೆಗೆ ಇಲ್ಲಿ ಉಲ್ಲೇಖವಿದ್ದರೂ ಮಾಹಿತಿ ಅಪೂರ್ಣ. ಕಾರಣವೆಂದರೆ ನಾನು ಆ ಸ್ಥಳಗಳಿಗೆ ಭೇಟಿಯಿತ್ತಿದ್ದರಿಂದ ಆ ಸ್ಥಳಗಳ ಕುರಿತು ಉಲ್ಲೇಖವಿದೆಯೇ ಹೊರತು ಪ್ರೇಕ್ಷಣೀಯ ಸ್ಥಳಗಳ ಕುರಿತು ಬರೆಯುವುದಕ್ಕಾಗಿ ಆ ಸ್ಥಳಗಳಿಗೆ ತೆರಳಿದ್ದಲ್ಲ. ಪ್ರತಿಯೊಂದು ವಿಷಯವನ್ನೂ ನನ್ನ ಮೂಗಿನ ನೇರಕ್ಕೆ ವ್ಯಾಖ್ಯಾನಿಸಿದ್ದೇ ಅಲ್ಲದೇ, ನನಗೆ ಸಂಬಂಧಪಡದ ಯಾವೊಂದು ಘಟನೆಯನ್ನೂ ವರ್ಣಿಸಿಲ್ಲ. ಆದ್ದರಿಂದ ಪ್ರಯಾಗ ಹಾಗೂ ಸುತ್ತಮುತ್ತಲಿನ ಪ್ರದೇಶದ ವೈಶಿಷ್ಟ್ಯ, ಜನಜೀವನದ ವೈಚಿತ್ರ್ಯಗಳನ್ನು ನನ್ನ ಅನುಭವಗಳ ಮೂಲಕ ತಿಳಿಯುವುದು ಅಸಾಧ್ಯ. ಇದೊಂದು ಪ್ರವಾಸಕಥನ ಎಂದುಕೊಂಡು ಓದಲಾರಂಭಿಸಿದರೆ ನಿರಾಶೆ ಖಚಿತ. ನಾನು ಬರೆದಿರುವುದು ಸ್ವಾನುಭವ ಹಾಗೂ ಸ್ವವೈಚಿತ್ರ್ಯ ಮಾತ್ರ. ನಾನು ನನ್ನ ಅನುಭವಗಳನ್ನು ಹಂಚಿಕೊಳ್ಳುವುದಿಲ್ಲ ಎಂದು ಆರೋಪಿಸುವವರನ್ನು ಶಾಂತಗೊಳಿಸುವ ಸಣ್ಣ ಪ್ರಯತ್ನ.

ಸೂರ್ಯ ಹೆಬ್ಬಾರ
ಪ್ರಯಾಗ್ ರಾಜ್
೦೭-೦೫-೨೦೧೮

ಸಪ್ಟೆಂಬರ್ ೫, ೨೦೧೭ ರ ಸಂಜೆ ೫ ಗಂಟೆಯ ಸುಮಾರಿಗೆ ವಿದ್ಯಾಪೀಠದಿಂದ ರೂಮಿಗೆ ಬಂದ ಗೆಳೆಯ ರವಿಶಂಕರ ಪ್ರಯಾಗದ ಪ್ರೊ. ಲಲಿತಕುಮಾರತ್ರಿಪಾಠೀ ಅವರಿಗೆ ಫೋನ್ ಮಾಡಲು ನೆನಪಿಸಿದ. ವಿದ್ಯಾವಾರಿಧಿಯ ಷಾಣ್ಮಾಸಿಕ ಪಾಠ್ಯಕ್ರಮವನ್ನು ಪ್ರಯಾಗದಲ್ಲಿ ನಡೆಯುವುದು ೯೯% ಖಚಿತವಾಗಿತ್ತು. ನಮ್ಮ ವಿಶ್ವವಿದ್ಯಾಲಯವಾದ ರಾಷ್ಟ್ರಿಯ ಸಂಸ್ಕೃತ ಸಂಸ್ಥಾನ, ಹೊಸ ನಿಯಮವೊಂದನ್ನು ಜಾರಿಗೆ ತಂದು ವಿದ್ಯಾವಾರಿಧಿಯ ಷಾಣ್ಮಾಸಿಕ ಪಾಠ್ಯಕ್ರಮವನ್ನು ಪ್ರಯಾಗದ ಗಂಗಾನಾಥ ಝಾ ಪರಿಸರದಲ್ಲಿ ನಡೆಸುವುದೆಂದು ೨೦೧೬-೧೭ ನೇ ಸಾಲಿನಲ್ಲಿ ಸುತ್ತೋಲೆ ಹೊರಡಿಸಿತ್ತು. ಹೀಗಿದ್ದರೂ ಕೂಡಾ ಸರ್ಕಾರದ ನಿಯಮಗಳು ಕ್ಷಣಕ್ಷಣಕ್ಕೂ ಬದಲಾಗುವುದರಿಂದ ಪ್ರಯಾಗಕ್ಕೆ ಹೋಗದೇ ವಿದ್ಯಾವಾರಿಧಿಯನ್ನು ಮುಗಿಸಬಹುದೇನೋ ಎಂಬ ಸಣ್ಣ ಆಸೆಯೊಂದು ಮನದ ಮೂಲೆಯಲ್ಲಿತ್ತು.

ವರ್ಷಕ್ಕೊಂದು ಬಾರಿ ನಡೆಯುವ ಯುಜಿಸಿ ನೆಟ್ ಪರೀಕ್ಷೆಗೆ ಆವೇದಿಸಲು ಸಪ್ಟೆಂಬರ್ ೧೦ ಕೊನೆಯ ದಿನಾಂಕವಾಗಿತ್ತು. ನವೆಂಬರ್ ೫ ರಂದು ನಡೆಯುವ ನೆಟ್ ಪರೀಕ್ಷೆಯನ್ನು ಯಾವ ಕೇಂದ್ರದಲ್ಲಿ ಬರೆಯುವುದೆಂಬ ಗೊಂದಲ ವಿದ್ಯಾವಾರಿಧಿ ಪ್ರವೇಶಪರೀಕ್ಷೆಯಲ್ಲಿ ಉತ್ತೀರ್ಣರಾದವರನ್ನೆಲ್ಲರನ್ನೂ ಕಾಡುತ್ತಿತ್ತು. ಏಕೆಂದರೆ ಷಾಣ್ಮಾಸಿಕ ಪಾಠ್ಯಕ್ರಮದ ತರಗತಿಗಳು ಪ್ರಯಾಗದಲ್ಲಿ ನಡೆಯುತ್ತವೆ ಎಂಬ ಸೂಚನೆಯಿತ್ತೇ ಹೊರತು ತರಗತಿಗಳ ಆರಂಭ ದಿನಾಂಕ ಯಾವುದು ಎನ್ನುವ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿದಿತ್ತು. ೨೦೧೬-೧೭ ನೇ ಸಾಲಿನಲ್ಲಿ ತರಗತಿಗಳ ಆರಂಭ ಜನವರಿಯಲ್ಲಾಗಿದ್ದರೂ ಈ ವರ್ಷ ಸಪ್ಟೆಂಬರ್ ತಿಂಗಳಿಂದಲೇ ತರಗತಿಗಳು ಆರಂಭವಾಗುತ್ತವೆ ಎಂಬ ಗಾಳಿಸುದ್ದಿಗಳು ಹಬ್ಬಿದ್ದವು. ಆದರೆ ಸಪ್ಟೆಂಬರ್ ತಿಂಗಳಲ್ಲಿ ವಾರವೊಂದು ಕಳೆದರೂ ತರಗತಿಗಳ ಬಗೆಗೆ ಯಾವುದೇ ಸೂಚನೆಗಳಿರಲಿಲ್ಲ. ಆದ್ದರಿಂದ ಸಪ್ಟೆಂಬರ್ ೫ ರಂದು ಷಾಣ್ಮಾಸಿಕ ಪಾಠ್ಯಕ್ರಮದ ಮುಖ್ಯಸ್ಥ ಪ್ರೊ. ಲಲಿತಕುಮಾರತ್ರಿಪಾಠೀ ಅವರಿಗೆ ಫೋನಾಯಿಸಿದೆ. ಅಕ್ಟೋಬರ್ ೨೩ ರಿಂದ ತರಗತಿಗಳು ಆರಂಭವಾಗುತ್ತವೆ. ಯುಜಿಸಿ ನೆಟ್ ಪರೀಕ್ಷೆಯನ್ನು ಬರೆಯಲು ಪ್ರಯಾಗದ ಕೇಂದ್ರವನ್ನೇ ಆಯ್ದುಕೊಳ್ಳಿ ಎಂದು ಸೂಚಿಸಿದರು.

ಅವರ ಮಾತುಗಳಿಂದ ನಮ್ಮ ತರಗತಿಗಳು ಪ್ರಯಾಗದಲ್ಲೇ ನಡೆಯುತ್ತವೆ ಎಂಬ ನಂಬಿಕೆ ೧೦೦% ದೃಢವಾದರೆ ನವಂಬರ್ ೫ ಕ್ಕಿಂತ ಮುಂಚಿತವಾಗಿ ನಡೆಯುತ್ತವೆ ಎಂಬ ನಂಬಿಕೆ ೫೦% ದೃಢವಾಯಿತು. ಆದರೆ ಸುಮಾರು ೮ ವರ್ಷಗಳಿಂದ ರಾಷ್ಟ್ರಿಯ ಸಂಸ್ಕೃತ ಸಂಸ್ಥಾನದ ಅಧಿಸೂಚನೆಗಳನ್ನು ನೋಡುತ್ತಿದ್ದರಿಂದಲೋ ಏನೋ,

ಅಕ್ಟೋಬರ್ ೨೩ ಕ್ಕೇ ತರಗತಿಗಳು ಆರಂಭವಾಗಬಹುದು ಎಂಬ ನಂಬಿಕೆಯಂತೂ ಹುಟ್ಟಲಿಲ್ಲ. ಅಲ್ಲದೇ ವಿಶ್ವವಿದ್ಯಾಲಯದಲ್ಲಿ ವಿದ್ಯಾವಾರಿಧಿ ವಿದ್ಯಾರ್ಥಿಗಳೆಂದರೆ ಅತ್ಯಂತ ನಿರ್ಲಕ್ಷಿತರು. ಬೇರೆಲ್ಲಾ ಕೆಲಸಗಳನ್ನು ಪೂರೈಸಿದ ನಂತರ ಪುರುಸೊತ್ತಾದರೆ ಅಧಿಕಾರಿಗಳು ವಿದ್ಯಾವಾರಿಧಿ ವಿದ್ಯಾರ್ಥಿಗಳ ಕಾರ್ಯ ಕಲಾಪಗಳತ್ತ ಗಮನ ಹರಿಸುತ್ತಾರೆ ಎಂಬ ಕಹಿ ಸತ್ಯವೂ ಅರ್ಥವಾಗಿತ್ತು.

ಏನಾದರಾಗಲಿ ನೆಟ್ ಪರೀಕ್ಷೆಯನ್ನು ಪ್ರಯಾಗದಲ್ಲೇ ಬರೆಯುವುದೆಂದು ನಿರ್ಧರಿಸಿದೆ. ಆವೇದನೆಗೆ ಕೊನೆಯ ದಿನಾಂಕವಾದ ಸಪ್ಟೆಂಬರ್ ೧೦ ರಂದು ರಾತ್ರಿ ೯ ಗಂಟೆಗೆ ಪರೀಕ್ಷೆಗೆ ಆವೇದಿಸಿದೆ. ನೆಟ್ ಪರೀಕ್ಷೆಯಲ್ಲಿ ಮೊದಲೇ ತೇರ್ಗಡೆಯಾಗಿದ್ದರಿಂದ ಪರೀಕ್ಷೆ ಬರೆಯುವ ಆಸಕ್ತಿಯೇನೂ ಅಷ್ಟಾಗಿ ಇರಲಿಲ್ಲ. ವಿಶಿಷ್ಟ ಶ್ರೇಣಿಯನ್ನು ಪಡೆದು ಜೆ.ಆರ್.ಎಫ್ ಎಂಬ ವಿದ್ಯಾರ್ಥಿವೇತನವನ್ನು ಪಡೆಯುವ ಹಗಲುಗನಸನ್ನಂತೂ ಕಂಡಿರಲಿಲ್ಲ. ಆದರೆ ಪರೀಕ್ಷೆಗೆ ಆವೇದಿಸದಿರಲೂ ಯಾವುದೇ ಕಾರಣಗಳಿರಲಿಲ್ಲ. ಆದ್ದರಿಂದ ಅಸಡ್ಡೆಯಿಂದಲೇ ೨ಜಿ ವೇಗದ ಅಂತರ್ಜಾಲ ಸಂಪರ್ಕದಲ್ಲಿ ಆವೇದನ ಪತ್ರವನ್ನು ತುಂಬಲಾರಂಭಿಸಿದೆ. ಯಾವುದಾದರೊಂದು ವಸ್ತುವನ್ನು ಪಡೆಯಲೇಬೇಕು ಎಂಬ ತುಡಿತದಿಂದ ಅಪೇಕ್ಷಿಸಿದರೆ ಅದು ಅಲಭ್ಯವಾಗಬಹುದು. ಆದರೆ ಸಿಗದಿದ್ದರೂ ತೊಂದರೆಯಿಲ್ಲ ಎಂಬ ಮನಃಸ್ಥಿತಿಯಿದ್ದರೆ ದೊರೆತುಬಿಡುತ್ತದೆ. ನನ್ನ ನೆಟ್ ಆವೇದನೆಯಲ್ಲೂ ಹೀಗೇ ಆಯಿತು. ವಾಟ್ಸಾಪ್ ಟೆಕ್ಸ್ಟ ಮೆಸೇಜ್ ಕಳುಹಿಸಲು ಕಷ್ಟವಾಗುವ ೨ಜಿ ನೆಟ್ವರ್ಕ್ನ್ ನಲ್ಲಿ ನನ್ನ ನೆಟ್ ಪರೀಕ್ಷೆಯ ಫಾರ್ಮ್ ಅಪ್ಲೋಡ್ ಆಗಿತ್ತು. ಪ್ರಯಾಗ ಪ್ರಯಾಣವನ್ನು ನಿಶ್ಚಯಿಸಿದ ನಂತರ ಮಾಡಿದ ಮೊದಲ ಕೆಲಸದಲ್ಲೇ ಯಶಸ್ಸು ದೊರಕಿದ್ದರಿಂದ ಪ್ರಯಾಗದಲ್ಲಿ ಯಾವುದೇ ತೊಂದರೆಯಾಗದು ಎಂಬ ಭಾವದಿಂದ ಮನಸ್ಸು ತೃಪ್ತವಾಗಿತ್ತು.

ರಾಷ್ಟ್ರಿಯ ಸಂಸ್ಕೃತ ಸಂಸ್ಥಾನದ ಶೃಂಗೇರಿ ಪರಿಸರದಿಂದ ೮ ವಿದ್ಯಾರ್ಥಿಗಳು ವಿದ್ಯಾವಾರಿಧಿಯ ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಶೋಧಕಾರ್ಯಕ್ಕೆ ಅರ್ಹತೆ ಗಳಿಸಿದ್ದೆವು. ವಿಶೇಷವೆಂದರೆ ೭ ವಿದ್ಯಾರ್ಥಿಗಳು ಮಾತ್ರ ವಿದ್ಯಾಪೀಠದಲ್ಲಿ ನೋಂದಾಯಿಸಿಕೊಂಡಿದ್ದೆವು. ಸಾವಿರಾರು ವಿದ್ಯಾರ್ಥಿಗಳು ಆವೇದಿಸಿದರೂ ಬೆರಳೆಣಿಕೆಯಷ್ಟು ವಿದ್ಯಾರ್ಥಿಗಳಿಗೆ ಮಾತ್ರ ಲಭ್ಯವಾಗುವ ವಿದ್ಯಾವಾರಿಧಿ ತರಗತಿಯ ಪ್ರವೇಶಕ್ಕೆ ಅರ್ಹತೆಯನ್ನು ಪಡೆದರೂ ನೋಂದಾವಣಿ ಮಾಡಿಸದ ಪುಣ್ಯಾತ್ಮ ಯಾರು ಎಂಬುವುದು ಯಕ್ಷಪ್ರಶ್ನೆಯಾಗಿತ್ತು. ಪ್ರವೇಶ ಪರೀಕ್ಷೆಯ ಫಲಿತಾಂಶದಲ್ಲಿ ದಾಖಲಾತಿ ಸಂಖ್ಯೆಯನ್ನಷ್ಟೇ ಪ್ರಕಟಿಸಿದ್ದರಿಂದ ಆ ವಿದ್ಯಾರ್ಥಿ

ಯಾರೆಂಬುದು ತಿಳಿಯಲಿಲ್ಲ. ಅಲ್ಲದೇ ಅದನ್ನು ತಿಳಿದುಕೊಳ್ಳುವುದರಿಂದ ನನಗಾಗುವ ಲಾಭ ಶೂನ್ಯವಾದ್ದರಿಂದ ತಿಳಿದುಕೊಳ್ಳುವ ಗೋಜಿಗೆ ಹೋಗಲಿಲ್ಲ. ನನ್ನ ವಿದ್ಯಾವಾರಿಧಿಯ ಸಹಪಾಠಿಗಳಲ್ಲಿ ೬ ಮಂದಿ ಬಾಲಕರಾದರೆ ಒಬ್ಬಾಕೆ ಬಾಲಕಿಯಾಗಿದ್ದಳು. ಆಕೆ ಮೂಲತಃ ಕರ್ನಾಟಕದವಳೇ ಆಗಿದ್ದರೂ ೩ ತಿಂಗಳ ಹಿಂದೆಯಷ್ಟೇ ಮದುವೆಯಾಗಿ ಗಂಡನ ಊರಾದ ಹಿಮಾಚಲ ಪ್ರದೇಶದಲ್ಲಿ ನೆಲೆಸಿದ್ದಳು. ೬ ಬಾಲರಲ್ಲಿ ಒಬ್ಬಾತ ಒರಿಸ್ಸಾ ರಾಜ್ಯದವನು. ಆದ್ದರಿಂದ ಪ್ರಯಾಗದ ವಾತಾವರಣ, ಆಹಾರಗಳ ಬಗ್ಗೆ ಆತನಿಗೆ ಚಿಂತೆಯಿರಲ್ಲ. ಇನ್ನುಳಿದ ನಾಲ್ಕು ಸಹಪಾಠಿಗಳೆಂದರೆ ಪುತ್ತೂರಿನ ರವಿಶಂಕರ, ಸಿದ್ದಾಪುರದ ಗಣೇಶ, ಶೃಂಗೇರಿಯ ಗಣೇಶಪ್ರಸಾದ ಹಾಗೂ ಕಾಸರಗೋಡಿನ ಮುರಳಿಕೃಷ್ಣ. ನಾಲ್ವರಿಗೂ ಪ್ರಯಾಗವಾಸದ ಬಗ್ಗೆ ಚಿಂತೆಯಿಲ್ಲದಿದ್ದರೂ ಚಿಂತನೆಯನ್ನು ಮಾಡುವ ಅವಶ್ಯಕತೆಯಂತೂ ಇತ್ತು. ಕರ್ನಾಟಕದ ಐವರೂ ಪ್ರಯಾಗದಲ್ಲಿ ಒಟ್ಟಿಗೇ ವಾಸಿಸುವುದೆಂದು ತೀರ್ಮಾನಿಸಿದೆವು. ಹಾಸ್ಟೆಲ್ ವ್ಯವಸ್ಥೆ ಇತ್ತಾದರೂ ಫೀಸ್ ದುಬಾರಿಯಾಗಿತ್ತು. ಅಲ್ಲದೇ ಹಾಸ್ಟೆಲ್ ನ ಊಟವೂ ಉತ್ತರಭಾರತದ್ದಾದುದರಿಂದ ಪ್ರಯಾಗದಲ್ಲಿ ನಾವೇ ಅಡುಗೆ ಮಾಡಿಕೊಳ್ಳುವುದೆಂದು ನಿರ್ಧರಿಸಿದೆವು.

ಹಾಗೆ ನೋಡಿದರೆ ಪ್ರಯಾಗದಲ್ಲಿ ತರಗತಿಗಳು ನಡೆಯಲಿವೆ ಎಂಬುವುದು ನಮಗೆ ಅಷ್ಟೇನೂ ಚಿಂತೆಯ ವಿಷಯವಾಗಿರಲಿಲ್ಲ. ಕಾರಣವೆಂದರೆ ಕಳೆದ ವರ್ಷ ಪ್ರಯಾಗದಲ್ಲಿ ಆರು ತಿಂಗಳ ಕಾಲ ನಮ್ಮ ಸ್ನೇಹಿತರು ನೆಲೆಸಿದ್ದರು. ಅವರ ಅನುಭವಗಳನ್ನು ಕೇಳಿ ತಿಳಿದುಕೊಂಡದ್ದರಿಂದ ಪ್ರಯಾಗದ ಬಗೆಗೆ, ತರಗತಿಗಳ ಬಗೆಗೆ ಸ್ಥೂಲವಾದ ಕಲ್ಪನೆಯಿತ್ತು. ಮಾನಸಿಕವಾಗಿಯೂ ತಕ್ಕಮಟ್ಟಿಗೆ ಸಿದ್ಧರಾಗಿದ್ದೆವು. ಕಳೆದ ಸಾಲಿನಲ್ಲಿ ಪ್ರಯಾಗದಲ್ಲಿದ್ದ ಗಣೇಶಕೃಷ್ಣ, ನಾಗಪತಿ, ಗೋವಿಂದ, ನಿರಂಜನ, ಅರುಣ, ಸುನೀಲ ಎಲ್ಲರೂ ನನ್ನ ಆತ್ಮೀಯ ಸ್ನೇಹಿತರಾಗಿದ್ದರು. ಇವರಲ್ಲಿ ನಾಲ್ವರು ಐದು ವರ್ಷ ನನ್ನ ಸಹಪಾಠಿಗಳು. ನಾನು ಒಂದು ವರ್ಷ ಬಿ.ಇಡಿ ಮಾಡಿದ್ದರಿಂದ ನನಗಿಂತ ೧ ವರ್ಷ ಮೊದಲೇ ವಿದ್ಯಾವಾರಿಧಿ ತರಗತಿಗೆ ಅವರ ಪ್ರವೇಶವಾಗಿತ್ತು. ಈ ವರ್ಷ ವಿದ್ಯಾವಾರಿಧಿ ವಿದ್ಯಾರ್ಥಿಗಳಲ್ಲಿ ರವಿಶಂಕರನೊಬ್ಬನ್ನು ಬಿಟ್ಟು ಉಳಿದವರೆಲ್ಲ ಅಷ್ಟೇನೂ ಆತ್ಮೀಯರಾಗಿರಲಿಲ್ಲ. ಆದರೆ ವಿದ್ಯಾಪೀಠದ ವಿದ್ಯಾರ್ಥಿ ಸಂಘವಾದ ವಾಗ್ವರ್ಧಿನೀ ಪರಿಷದ್ ನಲ್ಲಿ ಸ್ವಲ್ಪ ಮಟ್ಟಿಗೆ ತೊಡಗಿಸಿಕೊಂಡಿದ್ದರಿಂದಲೋ ಏನೋ ಎಲ್ಲರೊಂದಿಗೆ ಆತ್ಮೀಯರಂತೆ ನಟಿಸುವ ಸಾಮರ್ಥ್ಯ ಸ್ವಲ್ಪಮಟ್ಟಿಗೆ ಸಿದ್ಧಿಸಿತ್ತು. ಆದ್ದರಿಂದ ಆರು ತಿಂಗಳುಗಳ ಕಾಲ ಪ್ರಯಾಗದಲ್ಲಿ ಹೊಸ ಸ್ನೇಹಿತರೊಂದಿಗೆ ಹೊಂದಿಕೊಂಡು

ಸುಖವಾಗಿರುತ್ತೇನೆ ಎಂಬ ವಿಶ್ವಾಸವಿತ್ತು. ಹತ್ತನೇ ತರಗತಿಯವರೆಗೂ ಓದು ಓದು ಎಂದು ಒಂದೇ ಸಮನೆ ಹೇಳುತ್ತಿದ್ದ ನನ್ನ ತಂದೆ ೮ ವರ್ಷಗಳ ಹಿಂದೆ ನಾನು ಶೃಂಗೇರಿಗೆ ಹೊರಟು ನಿಂತಾಗ "ಚೆನ್ನಾಗಿ ಓದು" ಎನ್ನದೇ "ಯಾರಲ್ಲಿಯೂ ಜಗಳವಾಡಬೇಡ" ಎಂದು ಹೇಳಿದ್ದು ಬಲವಾಗಿ ಮನಸ್ಸಿಗೆ ನಾಟಿತ್ತು. ಅಂದಿನಿಂದ ೮ ವರ್ಷಗಳ ಕಾಲ ಸಾಧ್ಯವಾದಷ್ಟು ಮಟ್ಟಿಗೆ ಜಗಳವಾಡದೇ ಇದ್ದುದರಿಂದ ಲಾಭವಾದ ಅನೇಕ ಉದಾಹರಣೆಗಳು ಕಣ್ಣ ಮುಂದಿದ್ದವು. ಹೀಗೆ ಹೊಸ ಸ್ನೇಹಿತರೊಂದಿಗೆ ಹೊಸ ಪರಿಸರದಲ್ಲಿ ೬ ತಿಂಗಳ ಕಾಲ ವಾಸಿಸಲು ಮನಸ್ಸು ಸಿದ್ಧತೆಯನ್ನು ನಡೆಸುತ್ತಿತ್ತು. ಬಹುಶಃ ಉಳಿದ ನಾಲ್ವರು ವಿದ್ಯಾರ್ಥಿಗಳೂ ಪ್ರಯಾಗವಾಸಕ್ಕೆ ಮಾನಸಿಕವಾಗಿ ಸಿದ್ಧರಾಗುತ್ತಿದ್ದರು. ರೈಲಿನಲ್ಲಿ ಹೋಗಬೇಕಾದರೆ ಅನೇಕ ದಿವಸಗಳ ಮೊದಲೇ ಟಿಕೆಟ್ ಕಾಯ್ದಿರಿಸಬೇಕಾಗಿತ್ತು. ಆದರೆ ತರಗತಿಗಳ ಬಗೆಗೆ ಅಧಿಕೃತ ಅಧಿಸೂಚನೆ ಹೊರಬಿದ್ದಿರಲಿಲ್ಲ. ಆದರೂ ಟಿಕೆಟ್ ಕಾಯ್ದಿರಿಸುವುದೇ ಉತ್ತಮ ಎಂದು ಯೋಚಿಸಿದೆವು. ಪ್ರೊ. ಲಲಿತಕುಮಾರತ್ರಿಪಾಠೀ ಅವರ ಮಾತಿನಂತೆ ಅಕ್ಟೋಬರ್ ೨೩ ರಂದೇ ತರಗತಿಗಳು ಆರಂಭವಾದರೂ ಪ್ರವೇಶಕ್ಕೆ ೧೦-೧೫ ದಿನಗಳ ಗಡುವು ನೀಡಬಹುದು ಎಂದುಕೊಂಡು ಅಕ್ಟೋಬರ್ ೩೦ ಕ್ಕೆ ಯಶವಂತಪುರ-ಲಕ್ನೋ ಎಕ್ಸ್ ಪ್ರೆಸ್ ರೈಲಿನ ಸೀಟುಗಳನ್ನು ಕಾಯ್ದಿರಿಸಿದೆವು. ಅಲ್ಲದೇ ಅಕ್ಟೋಬರ್ ೨೦ರಿಂದ ದೀಪಾವಳಿ ಹಬ್ಬವಿರುವುದರಿಂದ ದೀಪಾವಳಿ ಹಬ್ಬದ ನಂತರ ಹೊರಡುವುದೆಂದು ತೀರ್ಮಾನಿಸಿದೆವು. ಅದೃಷ್ಟಕ್ಕೆ ಎಲ್ಲಾ ಸೀಟುಗಳು ಆರ್.ಎ.ಸಿಯಲ್ಲಿ ಸಿಕ್ಕಿದ್ದೂ ಅಲ್ಲದೇ ಕನ್ಫರ್ಮ್ ಆಗುವ ಎಲ್ಲಾ ಸಾಧ್ಯತೆಗಳೂ ನಿಚ್ಚಳವಾಗಿದ್ದವು.

ಅಂತೂ ಇಂತೂ ವಿದ್ಯಾವಾರಿಧಿಯ ವಿದ್ಯಾರ್ಥಿಗಳು ಅಕ್ಟೋಬರ್ ೨೫ ರಿಂದ ನವೆಂಬರ್ ೬ ರೊಳಗಿನ ಅವಧಿಯಲ್ಲಿ ಪ್ರಯಾಗದ ಗಂಗಾನಾಥ ಝಾ ಪರಿಸರದಲ್ಲಿ ನೋಂದಣಿ ಮಾಡಿಸಿಕೊಳ್ಳಬೇಕೆಂಬ ಅಧಿಕೃತ ಅಧಿಸೂಚನೆ ಅಕ್ಟೋಬರ್ ಮೊದಲ ವಾರದಲ್ಲಿ ಪ್ರಕಟವಾಯಿತು. "ನಿಮ್ಮ ಮಾರ್ಗದರ್ಶನದಲ್ಲಿ ವಿದ್ಯಾವಾರಿಧಿ ನಡೆಸುವ ವಿದ್ಯಾರ್ಥಿಗಳಿಗೆ ತರಗತಿಗಳಿಗೆ ಹಾಜರಾಗುವಂತೆ ಸೂಚಿಸಿ" ಎಂಬ ಸುತ್ತೋಲೆ ವಿದ್ಯಾಪೀಠದಲ್ಲಿ ಅತಿಥಿ ಪ್ರಾಧ್ಯಾಪಕನಾಗಿದ್ದ ನನ್ನ ಬಳಿಗೂ ಬಂದಿತು. ಸ್ವತಃ ವಿದ್ಯಾವಾರಿಧಿ ತರಗತಿಗೆ ಪ್ರವೇಶಿಸಲು ಸಿದ್ಧನಾಗಿರುವ ನನ್ನ ಮಾರ್ಗದರ್ಶನದಲ್ಲಿ ಯಾರು ತಾನೇ ವಿದ್ಯಾವಾರಿಧಿ ನಡೆಸಲು ಸಾಧ್ಯ ಎಂದು ಯೋಚಿಸಿ ಮುಗುಳ್ನಕ್ಕು ಸುತ್ತೋಲೆಗೆ ಸಹಿ ಹಾಕಿದೆ.

ಪ್ರಯಾಗಕ್ಕೆ ತೆರಳುವುದಕ್ಕೆ ಮಾನಸಿಕ ಸಿದ್ಧತೆ ನಡೆಯುತ್ತಿದ್ದರೂ ಮನಸ್ಸಿನಲ್ಲಿ ಮಂಡಿಗೆ ಮೆಲ್ಲುವುದರಿಂದ ಕಾರ್ಯಸಿದ್ಧಿಯಾಗದು. ಪ್ರವೃತ್ತಿಯೆಂಬುದು ಅತಿಮುಖ್ಯ. ಆದ್ದರಿಂದ ಎಲ್ಲರ ನಡುವೆ ಸಂವಹನಕ್ಕಾಗಿ ವಾಟ್ಸಾಪ್ ಗ್ರೂಪ್ ಒಂದನ್ನು ರಚಿಸಿದೆ. ವಾಸಕ್ಕಾಗಿ ಕೋಣೆಯೊಂದನ್ನು ಕಾಯ್ದಿರಿಸಲು ಕಳೆದ ಸಾಲಿನಲ್ಲಿ ಪ್ರಯಾಗದಲ್ಲಿ ವಾಸವಾಗಿದ್ದ ಮಿತ್ರರು ಸಹಾಯ ಮಾಡಿದರು. ಕಳೆದ ಸಾಲಿನಲ್ಲಿ ಪ್ರಯಾಗದಲ್ಲಿದ್ದ ೬ ಗೆಳೆಯರಲ್ಲಿ ಸ್ಥಳೀಯ ಜನರೊಂದಿಗೆ ಗರಿಷ್ಠ ಸಂಪರ್ಕ ಸಾಧಿಸಿದವರೆಂದರೆ ಸುನೀಲ ಹಾಗೂ ಗಣೇಶಕೃಷ್ಣ. ಸುನೀಲ ಚಿತ್ರದುರ್ಗದ ಖಾಸಗಿ ಶಾಲೆಯಲ್ಲಿ ಅಧ್ಯಾಪಕನಾಗಿ ವೃತ್ತಿಯನ್ನು ಆರಂಭಿಸಿದ್ದ. ಪ್ರಾಥಮಿಕ ಶಾಲೆಯ ಶಿಕ್ಷಕರ ಮೇಲೆ ವಿಶ್ವದ ಎಲ್ಲಾ ಕೆಲಸಗಳ ಹೊರೆ ಇರುತ್ತದೆ ಎಂಬುವುದು ಪ್ರಾಥಮಿಕ ಶಾಲಾ ಶಿಕ್ಷಕಿಯಾದ ಚಿಕ್ಕಮ್ಮನ ಕೆಲಸಗಳನ್ನು ನೋಡಿ ಅರಿವಾಗಿತ್ತು. ಖಾಸಗಿ ಶಾಲೆಗಳ ಅಧ್ಯಾಪಕರು ಮತ್ತಷ್ಟು ಶೋಷಣೆಗೊಳಪಡುತ್ತಾರೆ ಎಂಬುವುದನ್ನು ಕೇಳಿದ್ದ ನನಗೆ ಸುನೀಲನನ್ನು ಪೀಡಿಸುವ ಮನಸ್ಸಾಗಲಿಲ್ಲ. ಅಲ್ಲದೇ ೮ ವರ್ಷಗಳಿಂದ ನನ್ನ ರೂಮ್ ಮೇಟ್ ಆಗಿರುವ ಗಣೇಶಕೃಷ್ಣ ಪ್ರಯಾಗದಲ್ಲಿ ರೂಮ್ ವ್ಯವಸ್ಥೆ ಮಾಡಿಸಿಕೊಡುತ್ತೇನೆ ಎಂಬ ಆಶ್ವಾಸನೆಯನ್ನಿತ್ತಿದ್ದ. ಆಶ್ವಾಸನೆಯಂತೆ ಪ್ರಯಾಗದ ಉತ್ತರಾದಿಮಠದ ಮುಖ್ಯಸ್ಥರಾದ ರಾಘವೇಂದ್ರ ಆಚಾರ್ ಅವರನ್ನು ಸಂಪರ್ಕಿಸಿ ಕೋಣೆಯೊಂದನ್ನು ಕಾಯ್ದಿರಿಸಿದ. ಪ್ರಯಾಗದಲ್ಲಿ ನಾವೇ ಅಡುಗೆ ಮಾಡಿಕೊಂಡು ಉಣ್ಣುವುದು ಎಂಬ ನಿರ್ಣಯವಾದ್ದರಿಂದ ಪಾತ್ರೆ ಹಾಗೂ ಕೆಲವು ಅಡುಗೆ ಸಾಮಾನುಗಳನ್ನು ಕೊಂಡೊಯ್ಯಬೇಕಿತ್ತು. ಕಳೆದ ಸಾಲಿನಲ್ಲಿ ಪ್ರಯಾಗದಲ್ಲಿದ್ದ ಮಿತ್ರರಿಗೆ ಪ್ರಯಾಗದಲ್ಲಿ ಯಾವ ಯಾವ ವಸ್ತುಗಳು ದೊರಕಬಹುದು, ನಾವು ಯಾವ ವಸ್ತುಗಳನ್ನು ಕೊಂಡೊಯ್ಯಬೇಕು ಎಂಬ ಕಲ್ಪನೆಯಿರಲಿಲ್ಲ. ಆ ವಿಷಯದಲ್ಲಿ ನಾವು ಭಾಗ್ಯವಂತರು. ಮಿತ್ರರಾದ ಗಣೇಶಕೃಷ್ಣ ಹಾಗೂ ನಾಗಪತಿ ಪ್ರಯಾಗದಲ್ಲಿ ಅಡುಗೆಗೆ ಬೇಕಾಗುವ ಪರಿಕರಗಳ ವಿಷಯದಲ್ಲಿ ಕ್ಷಣಕ್ಷಣಕ್ಕೂ ಮಾಹಿತಿ ನೀಡುತ್ತಿದ್ದರು. ಪ್ರತಿ ಬಾರಿಯೂ ಶೃಂಗೇರಿಯಿಂದ ಊರಿಗೆ ಹೋಗುವಾಗ ಅಥವಾ ಊರಿನಿಂದ ಶೃಂಗೇರಿಗೆ ಬರುವಾಗ ಏನನ್ನಾದರೂ ಮರೆಯುವ ನಾನು ಈ ಬಾರಿ ಜಾಗರೂಕನಾಗಿದ್ದೆ. ಯಾವುದಾದರೊಂದು ವಸ್ತುವನ್ನು ಒಯ್ಯಬೇಕು ಎಂದು ನೆನಪಾದ ತಕ್ಷಣ ಚೀಟಿಯಲ್ಲಿ ಬರೆದಿಡುತ್ತಿದ್ದೆ. ಹೊರಡುವ ನಾಲ್ಕು ದಿನಗಳ ಮೊದಲು ನಾನು ಹಾಗೂ ಗಣೇಶ ಸೇರಿ ಯಾವ ವಸ್ತುಗಳನ್ನು ಯಾರ್ಯಾರು ಒಯ್ಯುವುದೆಂದು ನಿಶ್ಚಯಿಸಿದೆವು. ೨ ಕುಕ್ಕರ್, ೨ ದೊಡ್ಡ ಪಾತ್ರೆಗಳು, ಬಾಣಲೆ, ಸೌಟುಗಳು, ಚೂರಿ, ಸಾಂಬಾರ್ ಪುಡಿ, ರಸಂ ಪುಡಿ, ಪಲಾವ್ ಪುಡಿ,

ಪುಳಿಯೋಗರೆ ಪುಡಿ, ವಾಂಗಿ ಬಾತ್ ಪುಡಿ ಮುಂತಾದ ವಸ್ತುಗಳನ್ನು ಯಾರ್ಯಾರು ಹೊರುವುದೆಂದು ನಿರ್ಣಯವಾಗಿತ್ತು.

ನಮ್ಮ ವಸ್ತುಗಳ ಭಾರವೇ ಅತಿಯಾಗಬಹುದು ಎಂಬ ಚಿಂತೆಯಲ್ಲಿದ್ದ ನಮ್ಮನ್ನು ಮತ್ತೊಂದು ವಿಚಾರ ಸದಾ ಕಾಡುತ್ತಿತ್ತು. ಹಿಮಾಚಲ ಪ್ರದೇಶದಲ್ಲಿನ ಗಂಡನ ಮನೆಯಿಂದ ಪ್ರಯಾಗಕ್ಕೆ ತರಗತಿಗಳಿಗೆ ಬರುವ ವಿದ್ಯಾರ್ಥಿನಿ ವಾಣಿಯ ತಾಯಿ ಶೃಂಗೇರಿಯಲ್ಲಿ ವಾಸವಾಗಿದ್ದರಿಂದ ಮಗಳಿಗೆ ಕೆಲವೊಂದು ವಸ್ತುಗಳನ್ನು ನಮ್ಮ ಕೈಯಲ್ಲಿ ಕೊಟ್ಟು ಕಳುಹಿಸುವ ಯೋಚನೆಯಲ್ಲಿದ್ದರು. ಸಾಮಾನ್ಯವಾಗಿ ತಾಯಂದಿರಿಗೆ ಗಂಡು ಮಕ್ಕಳಿಗಿಂತ ಹತ್ತು ಪಟ್ಟು ಹೆಚ್ಚಿನ ಪ್ರೀತಿ ಹೆಣ್ಣು ಮಕ್ಕಳ ಮೇಲಿರುತ್ತದೆ. ಮದುವೆ ಮಾಡಿ ಗಂಡನ ಮನೆಗೆ ಕಳುಹಿಸಿದ ಮೇಲಂತೂ ಪ್ರೀತಿ ನೂರ್ಮಡಿಯಾಗುತ್ತದೆ. ಆದ್ದರಿಂದ ಭೇಟಿಯಾದಾಗಲೆಲ್ಲಾ ನೀವು "ಪ್ರಯಾಗಕ್ಕೆ ಹೋಗುವಾಗ ನನ್ನ ಮಗಳಿಗೆ ನೀಡಲು ಕೆಲವೊಂದು ವಸ್ತುಗಳನ್ನು ನೀಡುತ್ತೇನೆ. ದಯವಿಟ್ಟು ಕೊಂಡೊಯ್ಯಿರಿ" ಎಂದು ಹೇಳುತ್ತಿದ್ದರು. ವಾಣಿಯ ತಮ್ಮನೂ ಕೂಡಾ "ಸೂರ್ಯಣ್ಣ ನೀವು ಹೊರಡುವಾಗ ಹೇಳಿ. ಪಾರ್ಸೆಲ್ ಉಂಟು" ಎಂದು ಹೇಳುತ್ತಿದ್ದ. ಅಲ್ಲದೇ ಗೆಳೆಯನಾದ ನಾಗಪತಿಯ ಬಳಿಯಲ್ಲೂ "ಸೂರ್ಯನವರು ಪ್ರಯಾಗಕ್ಕೆ ಹೋಗುವಾಗ ಹೇಳಿ ಹೋಗಲಿ" ಎಂದು ಹೇಳಿಕಳಿಸಿದ್ದರು. ಹೊರಡುವ ಎರಡು ದಿನಗಳ ಮೊದಲು ಪಾರ್ಸೆಲ್ ನ ಭಾರದ ಹೆದರುತ್ತಲೇ ಅವರ ಮನೆಗೆ ಹೋಗಿ ನೋಡಿದರೆ ಅವರ ಮಗಳಿಗೆ ನೀಡಬೇಕಾದ ಪಾರ್ಸೆಲ್ ಅರ್ಧ ಕೆಜಿಯಷ್ಟೂ ಇರಲಿಲ್ಲ. ಮಗಳ ಮೇಲಿನ ವಾತ್ಸಲ್ಯದಿಂದಲೇ ಪಾರ್ಸೆಲ್ ವಿಷಯವನ್ನು ಮತ್ತೆ ಮತ್ತೆ ನೆನಪಿಸುತ್ತಿದ್ದರೇ ಹೊರತು ಪಾರ್ಸೆಲ್ ನ ಭಾರದಿಂದಲ್ಲ ಎಂಬುವುದನ್ನು ತಿಳಿದು ಸಂತೋಷವಾಯಿತು. ಪಾರ್ಸೆಲ್ ಹೊತ್ತೊಯ್ಯುವುದರಲ್ಲಿ ನಮಗೆ ತೊಂದರೆಯಾಗಬಾರದು ಎಂಬ ಅವರ ಕಾಳಜಿಯಲ್ಲಿ ನಮ್ಮ ಮೇಲಿನ ಮಾತೃಪ್ರೇಮವೂ ಪ್ರಕಟಗೊಂಡಿತ್ತು. ಅಷ್ಟೇ ಅಲ್ಲದೇ ನಮಗಾಗಿಯೂ ಒಂದಷ್ಟು ಸಾಂಬಾರ್ ಪುಡಿಯನ್ನು ಕೊಟ್ಟು ಕಳಿಸಿದ್ದರು.

೬ ತಿಂಗಳುಗಳ ಕಾಲ ದೂರದ ಪ್ರಯಾಗದಲ್ಲಿ ತರಗತಿಗಳು ನಡೆಯುವುದರಿಂದ ಅತಿಥಿ ಪ್ರಾಧ್ಯಾಪಕನ ಕೆಲಸ ಬಿಡುವುದು ಅನಿವಾರ್ಯವಾಗಿತ್ತು. ಅನೇಕ ಮಂದಿ ಮಿತ್ರರೂ ಹಿತೈಷಿಗಳೂ "ಹೇಗಾದರೂ ಮಾಡಿ ರಜೆಯನ್ನು ತೆಗೆದುಕೊಂಡು, ಅಥವಾ ಯಾವುದಾದರೂ ವಾಮಮಾರ್ಗದಿಂದ ವಿದ್ಯಾವಾರಿಧಿಯ ತರಗತಿಗಳಿಗೆ ಹಾಜರಾದ ಪ್ರಮಾಣಪತ್ರವನ್ನು ಗಳಿಸು" ಎಂಬ ಸಲಹೆಯನ್ನಿತ್ತರು. ಮತ್ತೆ ಕೆಲವರು "ಬೇರೆ ಎಲ್ಲಾದರೂ ಯಾವಾಗಲಾದರೂ ವಿದ್ಯಾವಾರಿಧಿ ಪದವಿಯನ್ನು

ಗಳಿಸಬಹುದು ಕೆಲಸ ಬಿಡಬೇಡ" ಎಂದು ಸೂಚಿಸಿದರು. ಆದರೆ ಏನಾದರಾಗಲಿ, ತರಗತಿಗಳಿಗೆ ಹಾಜರಾಗಿ ವಿದ್ಯಾವಾರಿಧಿಯನ್ನು ಮುಗಿಸಬೇಕು ಎಂಬುದಾಗಿ ನನ್ನ ಮಾರ್ಗದರ್ಶಕರಾದ ವಿದ್ಯಾಪೀಠದಲ್ಲಿ ಸಾಹಿತ್ಯ ವಿಭಾಗದ ಅಧ್ಯಕ್ಷರಾದ ಡಾ. ರಾಘವೇಂದ್ರ ಭಟ್ಟರ ಆದೇಶವಿತ್ತು. ತರಗತಿಗಳು ಆರಂಭವಾದ ತಕ್ಷಣ ನನ್ನ ಕೆಲಸವನ್ನು ಬಿಡುತ್ತೇನೆ ಎಂಬ ದೃಢ ನಿರ್ಧಾರ ನನ್ನದಾಗಿತ್ತು. ತಂದೆ ತಾಯಿಯರ ಬೆಂಬಲವೂ ಬೆನ್ನಿಗಿತ್ತು. ಹೀಗಾಗಿ ಯಾರು ಏನೇ ಹೇಳಿದರೂ ಪ್ರಯಾಗಕ್ಕೆ ಹೋಗಿಯೇ ಸಿದ್ಧ ಎಂಬ ದೃಢ ನಿರ್ಣಯದಿಂದ ಕೆಲಸವನ್ನು ತ್ಯಜಿಸಿದೆ.

ಪ್ರಯಾಗಕ್ಕೆ ಹೊರಡುವ ದಿನ ಸಮೀಪಿಸುತ್ತಿರುವಂತೆ ಸಿದ್ಧತೆಗಳು ಭರದಿಂದ ಸಾಗುತ್ತಿದ್ದವು. ನನ್ನ ಮತ್ತೊಬ್ಬ ಗೆಳೆಯ ಮಂಜುನಾಥ ತನ್ನ ವಾಸ್ತವ್ಯವನ್ನು ಶೃಂಗೇರಿಯಿಂದ ಬೆಂಗಳೂರಿಗೆ ವರ್ಗಾಯಿಸುವುದರಲ್ಲಿದ್ದ. ಆತನ ಬೈಕನ್ನು ಬೆಂಗಳೂರಿಗೆ ಒಯ್ಯಲು ರವಿಶಂಕರನೂ ಅಕ್ಟೋಬರ್ ೨೯ರಂದು ಆತನೊಂದಿಗೆ ಬೆಂಗಳೂರಿಗೆ ಹೋಗುವುದೆಂದು ತೀರ್ಮಾನವಾಯಿತು. ನನ್ನೊಂದಿಗೆ ಪ್ರಯಾಗಕ್ಕೆ ಹೊರಟಿದ್ದ ಮಿತ್ರರಲ್ಲಿ ಗಣೇಶ ಹಾಗೂ ಮುರಳಿಕೃಷ್ಣ ಬೆಂಗಳೂರಿನಲ್ಲಿ ಭೇಟಿಯಾಗುತ್ತೇವೆ ಎಂದು ಹೇಳಿ ಊರಿಗೆ ತೆರಳಿದ್ದರು. ರವಿಶಂಕರನೂ ಬೈಕಿನಲ್ಲಿ ಬೆಂಗಳೂರಿಗೆ ಹೋದದ್ದರಿಂದ ಆತನ ಚೀಲಗಳನ್ನೂ ನಾನೇ ಒಯ್ಯಬೇಕಾಯಿತು. ಅದೃಷ್ಟಕ್ಕೆ ಗೆಳೆಯ ನಾಗಪತಿ ಬಹಳ ಚಾಕಚಕ್ಯತೆಯಿಂದ ರವಿಶಂಕರನ ಬಟ್ಟೆಗಳನ್ನೆಲ್ಲಾ ಒಂದೇ ಚೀಲದಲ್ಲಿ ತುರುಕಿದ್ದ. ಅದಾಗ್ಯೂ ರವಿಶಂಕರನದ್ದೇ ೩ ಚೀಲಗಳಿದ್ದವು. ಯಾವುದೇ ಪ್ರವಾಸಕ್ಕೆ ಹೊರಡುವುದಾದರೂ ನನ್ನ ಚೀಲ ಅತ್ಯಂತ ಸಣ್ಣದಾಗಿರುತ್ತದೆ. ಆದರೆ ಈ ಬಾರಿ ೬ ತಿಂಗಳ ಪ್ರವಾಸವಾದ್ದರಿಂದ ಒಂದು ದೊಡ್ಡ ಚೀಲ ಹಾಗೂ ೨ ಸಣ್ಣ ಕೈಚೀಲಗಳಿದ್ದವು. ಮತ್ತೊಬ್ಬ ಮಿತ್ರ ಗಣೇಶಪ್ರಸಾದನ ಎರಡು ದೊಡ್ಡ ಚೀಲಗಳಿದ್ದವು. ಹೀಗೆ ನಮ್ಮ ಬಳಿ ಒಟ್ಟು ೮ ಚೀಲಗಳಾಗಿ ಚೀಲಗಳ ರಾಶಿಯೇ ಭಯ ಹುಟ್ಟಿಸುವಂತಿತ್ತು. ಅಕ್ಟೋಬರ್ ೩೦ರ ಸೋಮವಾರ ಬೆಳಿಗ್ಗೆ ೧೧.೩೦ ಕ್ಕೆ ಶೃಂಗೇರಿಯಿಂದ ಬೆಂಗಳೂರಿಗೆ ಬಸ್ಸಿನಲ್ಲಿ ಹೊರಡುವುದೆಂದು ತೀರ್ಮಾನವಾಯಿತು. ಗಣೇಶಪ್ರಸಾದನ ಕಾರಿನಲ್ಲಿ ಬಸ್ ಸ್ಟಾಂಡಿಗೆ ಹೊರಟೆವು. ನಾಗಪತಿ ಹಾಗೂ ಗಣೇಶಕೃಷ್ಣ ಬಸ್ ಸ್ಟಾಂಡಿಗೆ ಬಂದು ನಮ್ಮ ಚೀಲಗಳನ್ನು ಬಸ್ಸಿಗೇರಿಸಲು ಸಹಕರಿಸಿದರು. ಕಾರಿನಲ್ಲಿ ಬಸ್ ಸ್ಟಾಂಡಿಗೆ ಹೋಗುತ್ತಿರುವಾಗ ದಾರಿ ಮಧ್ಯದಲ್ಲಿ ಕಟ್ಟೆಬಾಗಿಲಿನ ಬಳಿಯಲ್ಲಿ ಕಾರಿನ ಟಯರ್ ಪಂಚರ್ ಆದರೂ ಬಸ್ ಸ್ಟಾಂಡಿನ ತನಕ ಅದೇ ಕಾರಿನಲ್ಲಿ ಹೇಗೋ ತಲುಪಿದೆವು. "ಹೊರಟಾಗ ಘಟಿಸಿದ ಸಣ್ಣ ವಿಘ್ನದಿಂದಾಗಿ ೬ ತಿಂಗಳ ಕಾಲ ಯಾವುದೇ ವಿಘ್ನ

ಸಂಭವಿಸದು" ಎಂದು ಟಯರ್ ಪಂಕ್ಚರ್ ಆದುದನ್ನು ವ್ಯಾಖ್ಯಾನಿಸಿದೆ. ಆಶ್ಚರ್ಯವೆಂದರೆ ಅಷ್ಟೂ ಚೀಲಗಳನ್ನು ಕಂಡಕ್ಟರ್ ನ ಎದುರಲ್ಲೇ ಬಸ್ಸಿನೊಳಗೆ ತುರುಕಿದರೂ ಕಂಡಕ್ಟರ್ ಲಗೇಜ್ ಚಾರ್ಜ್ ಎಂದು ಟಿಕೆಟ್ ಹರಿಯಲಿಲ್ಲ. ಲಗೇಜ್ ಇಳಿಸುವ ಪರಿ ಹೇಗೆ ಎಂದು ಚಿಂತಿಸುತ್ತಾ ರಾತ್ರೆ ೮ ಗಂಟೆಯ ಸುಮಾರಿಗೆ ಯಶವಂತಪುರ ತಲುಪಿದೆವು. ಲಗೇಜ್ ಇಳಿಸಲು ಅನುಕೂಲವಾಗಲಿ ಎಂದು ಗುರುಗುಂಟೆಪಾಳ್ಯದಿಂದ ಕಂಡೆಕ್ಟರ್ ನೊಂದಿಗೆ ಆತ್ಮೀಯವಾಗಿ ಹರಟಿದ್ದು ಫಲ ನೀಡಿತು. ಬೇಗ ಬೇಗ ಎಂದು ಹೇಳುವುದನ್ನು ಬಿಟ್ಟು ನಿಧಾನ ಇಳಿಸಿ ಹರೀಬಹುದು ಎಂದು ಹೇಳುವ ಮೂಲಕ ಕಂಡಕ್ಟರ್ ವೃತ್ತಿ ಧರ್ಮವನ್ನೇ ಮರೆತಿದ್ದ. ಲಗೇಜನ್ನು ಸಾಗಿಸಲು ನಾನು ಬರುತ್ತೇನೆ ಎಂದು ರವಿಶಂಕರ ಹೇಳಿದ್ದರೂ ಆತ ಬರಲಾರ ಎಂಬುವುದನ್ನು ಆತನೊಂದಿಗಿನ ೬ ವರ್ಷಗಳ ಒಡನಾಟದಿಂದ ಅರಿತಿದ್ದೆ. ನಮ್ಮ ಲಗೇಜ್ ನೋಡಿ ಭಯಗೊಂಡಿದ್ದರಿಂದಲೋ ಏನೋ ಆಟೋ ಚಾಲಕನೊಬ್ಬ "ಇಲ್ಲೇ ಹತ್ರ ಸ್ಟೇಶನ್ ಇದೆ. ನಡ್ಕೊಂಡು ಹೋಗಿ ಆಟೋ ಸುತ್ತು ಹಾಕಿ ಹೋಗತ್ತೆ", ಎಂದುಬಿಟ್ಟ. ಇದ್ದಷ್ಟೂ ಲಗೇಜ್ ಗಳನ್ನು ಹೆಗಲಲ್ಲೊಂದು, ಬಗಲಲ್ಲೊಂದು, ಬೆರಳಲ್ಲೊಂದು ಎಂಬಂತೆ ಹೊತ್ತುಕೊಂಡು, ಎತ್ತಿಕೊಂಡು, ಎಳೆದುಕೊಂಡು ಯಶವಂತಪುರದ ರೈಲ್ವೇ ನಿಲ್ದಾಣದ ಆರನೇ ಪ್ಲಾಟ್ ಫಾರಂನ ಹೊರಭಾಗಕ್ಕೆ ತಂದಿಟ್ಟೆವು. ಸುಮಾರು ಅರ್ಧ ಕಿಮೀ ದೂರದ ರೈಲುನಿಲ್ದಾಣದ ತನಕ ಇಷ್ಟು ಚೀಲಗಳನ್ನು ಸಾಗಿಸಿದ ನಾವು ಖಂಡಿತವಾಗಿಯೂ ಪ್ರಯಾಗದಲ್ಲಿ ಸುಖವಾಗಿರುತ್ತೇವೆ ಎಂಬ ವಿಶ್ವಾಸ ಮತ್ತಷ್ಟು ದೃಢವಾಯಿತು. ರಾತ್ರೆ ೯.೩೦ ರ ಸುಮಾರಿಗೆ ರವಿಶಂಕರ, ಗಣೇಶ, ಮುರಳಿಕೃಷ್ಣ ಬಂದು ನಮ್ಮನ್ನು ಸೇರಿಕೊಂಡರು. ರೈಲು ನಿಲ್ದಾಣದ ಕಾಮತ್ ಹೋಟೆಲ್ ನಲ್ಲಿ ಊಟ ಮುಗಿಸಿ ೧೦.೩೦ಕ್ಕೆ ರೈಲನ್ನೇರಿದೆವು. ೧೧.೪೫ಕ್ಕೆ ರೈಲು ನಿಲ್ದಾಣದಿಂದ ಹೊರಟಿತು. ಪುಣ್ಯಕ್ಕೆ ಎಲ್ಲಾ ಸೀಟುಗಳೂ ಅಕ್ಕಪಕ್ಕದಲ್ಲೇ ಸಿಕ್ಕಿದ್ದರಿಂದ ಲಗೇಜುಗಳನ್ನೆಲ್ಲ ಸೀಟಿನ ಅಡಿಯಲ್ಲಿ ತುರುಕಿ ನಿರಾಳರಾಗಿದ್ದೆವು. ಇಡೀ ರಾತ್ರೆ ನಿದ್ದೆ ಮಾಡಿ ಎದ್ದಾಗ ಬೆಳಿಗ್ಗೆ ೭.೩೦ ಗಂಟೆಯಾಗಿತ್ತು. ಗಣೇಶಪ್ರಸಾದ ಹಾಗೂ ಗಣೇಶ ಮನೆಯಿಂದ ಚಪಾತಿಗಳನ್ನು ಮಾಡಿ ತಂದಿದ್ದರಿಂದ ಪ್ರಯಾಣದಲ್ಲಿ ಊಟದ ವಿಷಯದಲ್ಲಿ ಸಮಸ್ಯೆಯಾಗಲಿಲ್ಲ. ಅಲ್ಲದೇ ವರ್ಷಕ್ಕೆ ನಾಲ್ಕೈದು ಬಾರಿ ವಿದ್ಯಾಪೀಠದ ವತಿಯಿಂದ ದೂರದೂರುಗಳಿಗೆ ರೈಲುಗಳಲ್ಲಿ ಪ್ರಯಾಣಿಸಿ ಅನುಭವವಿರುವುದರಿಂದ ಪ್ರಯಾಣದ ಸಮಯದಲ್ಲಾಗುವ ತೊಂದರೆಗಳ ಬಗೆಗಾಗಲೀ, ಅವುಗಳನ್ನು ನಿವಾರಿಸಿಕೊಳ್ಳುವ ಬಗೆಗಾಗಲೀ ಸ್ಪಷ್ಟ ಕಲ್ಪನೆಯಿತ್ತು. ಹೀಗಾಗಿ ಸುಖವಾಗಿ ೨ ರಾತ್ರಿ ಹಾಗೂ ಒಂದೂವರೆ ಹಗಲುಗಳನ್ನು ಕಳೆದು ನವಂಬರ್

೧ರ ಮಧ್ಯಾಹ್ನ ೨.೦೦ ಗಂಟೆಗೆ ಅಲಹಾಬಾದ್ ಜಂಕ್ಷನ್ ರೈಲು ನಿಲ್ದಾಣವನ್ನು ತಲುಪಿದೆವು.

ಪ್ರಯಾಗದಲ್ಲಿನ ಆಟೋರಿಕ್ಷಾ ವ್ಯವಸ್ಥೆ ಕರ್ನಾಟಕಕ್ಕಿಂತ ಸ್ವಲ್ಪ ಭಿನ್ನ. ಪ್ರಯಾಗದಲ್ಲಿ ಸಿಟಿ ಬಸ್ಸುಗಳು ಅತ್ಯಂತ ವಿರಳ. ಬದಲಾಗಿ ಭಾರತದ ಇತರ ಅನೇಕ ನಗರಗಳಲ್ಲಿರುವಂತೆ ಶೇರ್ ಆಟೋದಲ್ಲಿ ಜನಸಂಚಾರ ವ್ಯಾಪಕವಾಗಿದೆ. ಪ್ರಯಾಗದಲ್ಲಿನ ಶೇರ್ ಆಟೋವೊಂದರಲ್ಲಿ ಕನಿಷ್ಠ ೧೧ ಪ್ರಯಾಣಿಕರಿರುತ್ತಾರೆ. ರೈಲ್ವೇ ನಿಲ್ದಾಣದಿಂದ ಅಂತಹ ೧೧ ಜನ ಪ್ರಯಾಣಿಸುವ ಆಟೋದಲ್ಲಿ ಪ್ರಯಾಗದಲ್ಲಿ ಉತ್ತರಾದಿ ಮಠದ ಶಾಖೆಯಿರುವ ದಾರಾಗಂಜ್ ಎಂಬಲ್ಲಿಗೆ ಬಂದಿಳಿದೆವು. ೧೧ ಜನ ಪ್ರಯಾಣಿಸಬಹುದಾದಂತಹ ಆಟೋ ೫ ಜನ ಹಾಗೂ ಚೀಲಗಳಿಂದ ಸಂಪೂರ್ಣವಾಗಿ ಭರ್ತಿಯಾಗಿತ್ತು. ಉತ್ತರಾದಿ ಮಠವನ್ನು ತಲುಪಿದ ಕೂಡಲೇ ನಮ್ಮನ್ನು ಬರಮಾಡಿಕೊಂಡ ಮಠದ ಮುಖ್ಯಸ್ಥ ರಾಘವೇಂದ್ರ ಆಚಾರ್ ಸ್ನಾನಾದಿಗಳನ್ನು ಪೂರೈಸಲು ಮಠದಲ್ಲೇ ಕೋಣೆಯೊಂದನ್ನು ನೀಡಿದರು. ಸ್ನಾನಾದಿಗಳನ್ನು ಮುಗಿಸಿ. ಪಕ್ಕದಲ್ಲಿನ ಮಾಧ್ವಮಠದಲ್ಲಿ ಊಟದ ವ್ಯವಸ್ಥೆಯಾಗಿದೆ ಊಟ ಮಾಡಿ ಎಂದು ಸೂಚಿಸಿದರು. ಊಟದ ನಂತರ ಮೊದಲೇ ಕಾಯ್ದಿರಿಸಿದ್ದ ನಮ್ಮ ಆರು ತಿಂಗಳ ವಾಸದ ಭವನಕ್ಕೆ ಕರೆದುಕೊಂಡು ಹೊರಟರು.

ಪ್ರಯಾಗ ಕ್ಷೇತ್ರದಲ್ಲಿ ಮಠವೊಂದರ ಮುಖ್ಯಸ್ಥರಾಗಿ ಸದಾ ಶ್ರಾದ್ಧಾದಿಗಳನ್ನು ಮಾಡಿಸುವುದರಲ್ಲೇ ವ್ಯಸ್ತರಾಗಿರುವ ರಾಘವೇಂದ್ರ ಆಚಾರ್ ನಮ್ಮ ವಾಸ್ತವ್ಯದ ಕೋಣೆಯನ್ನು ತೋರಿಸಲು ಸ್ವಯಂ ಹೊರಟದ್ದು ನಮ್ಮ ಭಾಗ್ಯವೆಂದರೆ ತಪ್ಪಲ್ಲ. ನಮಗೆ ವಾಸದ ಕೋಣೆಯನ್ನು ವ್ಯವಸ್ಥಾಪಿಸಿದ್ದ ಬಟ್ಟೆ ಅಂಗಡಿಯೊಂದರ ಮಾಲಕ ರಾಜೇಶ್ ೧೦X೬ ಅಡಿಯ ೨ ಕೋಣೆಗಳನ್ನು ತೋರಿಸಿದ್ದ. ಅಲ್ಲದೇ ಶೌಚಾಲಯ, ಬಚ್ಚಲು ಮನೆಗಳೂ ಸರಿಯಾಗಿರಲಿಲ್ಲ. "ಈ ಕೋಣೆ ನಿಮ್ಮ ವಾಸಕ್ಕೆ ಯೋಗ್ಯವಾಗಿಲ್ಲ, ಇಲ್ಲಿ ವಾಸ್ತವ್ಯ ಬೇಡ" ಎಂದು ರಾಘವೇಂದ್ರ ಆಚಾರ್ ಆದೇಶಿಸಿದರು. ಹಾಗಾದರೆ ನಮ್ಮ ವಾಸ್ತವ್ಯವೆಲ್ಲಿ ಎಂಬ ಪ್ರಶ್ನೆಗೆ ನಾವು ಕೇಳದೆಯೇ ಉತ್ತರವಿತ್ತರು. "ನಮ್ಮ ಮಠದ ಕೋಣೆಯೊಂದರಲ್ಲಿ ೪ ದಿನಗಳ ಮಟ್ಟಿಗೆ ತಾತ್ಕಾಲಿಕವಾಗಿ ವಾಸಿಸಿ, ನಿಮಗೆ ಕೋಣೆಯನ್ನು ನಾನು ವ್ಯವಸ್ಥಾಪಿಸುತ್ತೇನೆ”. ಎಂದು ಹೇಳಿ ನಮಗೆ ಕೋಣೆಯೊಂದನ್ನು ನೀಡಲು ಸಹಾಯಕನಾದ 'ಗುನ್ನು' ಎಂಬುವವರನ್ನು ಕರೆದು ಆದೇಶಿಸಿದರು. ನಾವು ಕೂಡಾ ರೂಮ್ ಹುಡುಕಲು ಪ್ರಯತ್ನಿಸುತ್ತೇವೆ. ಎಂದು ಹೇಳಿ ಮಠದ ಕೋಣೆಗೆ ಹೊರಟೆವು.

ರಾಘವೇಂದ್ರ ಆಚಾರ್ ಮೂಲತಃ ಕರ್ನಾಟಕದವರಾದರೂ ಅವರ ಕುಟುಂಬ ಅನೇಕ ವರ್ಷಗಳ ಹಿಂದೆ ಉತ್ತರ ಭಾರತಕ್ಕೆ ವಲಸೆ ಬಂದಿತ್ತು. ಆದ್ದರಿಂದ ಅವರಿಗೆ ಕನ್ನಡ ಭಾಷೆ ಚೆನ್ನಾಗಿ ಬರುತ್ತಿರಲಿಲ್ಲ. ಪಿಂಡ ಪ್ರದಾನ ಮಾಡಲು ಬಂದ ಯಾತ್ರಾರ್ಥಿಗಳೊಂದಿಗೆ ಮಾತನಾಡಿ ಅಲ್ಪ ಸ್ವಲ್ಪ ಕನ್ನಡದ ಅಭ್ಯಾಸವಾಗಿತ್ತು. ನಮ್ಮ ಭೇಟಿಯಾದ ತಕ್ಷಣ "ನಮ್ದು ಕನ್ನಡ ಸರಿ ಇಲ್ಲ, ಹಿಂದಿ, ಮರಾಠಿ ಓಕೆ". ಎಂದು ಹೇಳಿದ್ದರು. ಆದರೆ ನಮ್ಮೊಂದಿಗೆ ಕನ್ನಡದಲ್ಲೇ ವ್ಯವಹರಿಸುತ್ತಿದ್ದರು. ಕೆಲವೊಂದು ಬಾರಿ ಅವರ ಮಾತಿನ ಅಭಿಪ್ರಾಯ ಸ್ಪಷ್ಟವಾಗುತ್ತಿರಲಿಲ್ಲ. "ನಾವು ರೂಮ್ ಕೊಡ್ತಾರೆ. ಚಾ ಕುಡಿತಾರೆ. ನಂತರ್ ರೂಮಿಗೆ ಹೋಗ್ತಾರೆ". ಎಂದು ಹೇಳಿದರು. ಅದರರ್ಥ ನನ್ನ ಮನೆಯಲ್ಲಿ ಚಾ ಕುಡಿದು ನಂತರ ರೂಮಿಗೆ ಹೋಗಬೇಕು ಎಂದಾಗಿತ್ತು. ಚಹ ಕುಡಿದು ಹೊರಡುವಾಗ "ರೂಮಿನ ಕಿಟಕಿಯಲ್ಲಿ ಯಾವುದೇ ವಸ್ತು ಬೇಡ ಇಡ್ತಾರೆ. ಯಾಕೆ ಕೋತಿ ಭಾಳ್ ಇದಾರೆ. ಕೋತಿ ಬರ್ತಾರೆ ನಿಮ್ಮ ವಸ್ತು ತಗೊಂಡು ಹೋಗ್ತಾರೆ". ಎಂದರು. ರೂಮಿನ ಕಿಟಕಿಯಲ್ಲಿ ವಸ್ತುಗಳನ್ನಿಟ್ಟರೆ ಕೋತಿಗಳು ತೆಗೆದುಕೊಂಡು ಹೋಗುತ್ತವೆ ಎಂಬುವುದು ತಾತ್ಪರ್ಯವಾಗಿತ್ತು. ಅವರ ಕನ್ನಡ ಕೇಳಿ ನಗು ಬಂದರೂ ಕನ್ನಡ ಮಾತನಾಡುವುದನ್ನು ಕಂಡು ಅಚ್ಚರಿಯೂ ಆಯಿತು. ಅವರ ಮಾತುಗಳನ್ನು ಮೆಲುಕು ಹಾಕುತ್ತಾ ಮಠದ ಕೋಣೆಗೆ ತೆರಳಿದೆವು.

ಆ ದಿನ ಸಂಜೆಯಿಂದಲೇ ಪ್ರಯಾಗದ ದಾರಾಗಂಜ್ ನ ಗಲ್ಲಿಗಲ್ಲಿಗಳಲ್ಲಿ ರೂಮಿಗಾಗಿ ಹುಡುಕಾಟ ಆರಂಭವಾಯಿತು. ಅನೇಕ ಕಡೆಗಳಲ್ಲಿ ರೂಮುಗಳನ್ನು ಕೇಳುತ್ತಾ ರಾತ್ರೆಯ ಊಟಕ್ಕೆ ಮೊಸರನ್ನು ಕೊಳ್ಳಲು 'ಸಾಯಿ ಗೋಕುಲಂ' ಎಂಬ ಅಂಗಡಿಗೆ ಹೋದೆವು. ಅಡುಗೆ ಮಾಡಿಕೊಳ್ಳಲು ಗ್ಯಾಸ್ ವ್ಯವಸ್ಥೆಯನ್ನು ರಾಘವೇಂದ್ರ ಆಚಾರ್ ಮಧ್ಯಾಹ್ನವೇ ಮಾಡಿಕೊಟ್ಟಿದ್ದರು. ಅಲ್ಲದೇ ಸಾಮಾನುಗಳನ್ನು ಕೊಳ್ಳಲು 'ಬಂಟು' ಎಂಬುವವನ ಅಂಗಡಿಯನ್ನೂ ಪರಿಚಯಿಸಿದ್ದರು. ಕಳೆದ ವರ್ಷ ಪ್ರಯಾಗದಲ್ಲಿದ್ದ ಮಿತ್ರರೂ ಯಾವ ವಸ್ತುಗಳು ಎಲ್ಲಿ ದೊರೆಯುತ್ತವೆ ಎಂಬ ಮಾಹಿತಿ ನೀಡಿದ್ದರು. ರಾತ್ರೆ ಅನ್ನ ಮಾಡಿ ಮೊಸರು ಕೊಂಡರಾಯಿತು ಎಂದು ಸಾಯಿ ಗೋಕುಲಂಗೆ ಬಂದಾಗ ಮೊಸರು ಕೊಳ್ಳುವುದರೊಂದಿಗೆ ಮತ್ತೊಂದು ಪ್ರಯೋಜನವೂ ಆಯಿತು. ಕಾಶಿ ಮಠದ ಪ್ರಯಾಗ ಶಾಖೆಯ ಮುಖ್ಯಸ್ಥರಾದ ಕನ್ನಡಿಗ ಸುಧೀಶ ಶೆಣೈ ಅವರ ಭೇಟಿಯಾಯಿತು. ನಮ್ಮ ಆಸುಪಾಸಿನಲ್ಲೇ ಕರ್ನಾಟಕದ ಮಂದಿ ವಾಸವಾಗಿದ್ದಾರೆ ಎಂದು ತಿಳಿದು ಆನಂದವಾಯಿತು. ನಮ್ಮ ವಾಸಕ್ಕೆ ಎಲ್ಲಿಯಾದರೂ ವ್ಯವಸ್ಥೆಯಾಗಬಹುದೇ ಎಂದು ಅವರಲ್ಲೂ ಹೇಳಿಟ್ಟು ಮಠದ ಕೋಣೆಗೆ

ವಾಪಾಸ್ಸಾದೆವು. ಅದೇ ದಿನ ಉತ್ತರಾದಿ ಮಠದಲ್ಲಿ ತುಲಸೀ ವಿವಾಹ ಕಾರ್ಯಕ್ರಮವಿತ್ತು. ತುಲಸೀ ವಿವಾಹಕ್ಕೆ ಬರಬೇಕು ಎಂದು ರಾಘವೇಂದ್ರ ಆಚಾರ್ ಆಹ್ವಾನಿಸಿದ್ದರು. ಅವರು ಅತ್ಯಂತ ವಾತ್ಸಲ್ಯದಿಂದ ಕೂಡಿದವರಾಗಿದ್ದರೂ ಸ್ವಲ್ಪ ಸಿಡುಕು ಸ್ವಭಾವದವರಾಗಿದ್ದರು. ಅಲ್ಲದೇ ಕನ್ನಡದಲ್ಲಿ ವ್ಯವಹರಿಸಿ ಅಭ್ಯಾಸ ಇಲ್ಲದ್ದರಿಂದ ಮಾತನಾಡುವಾಗ ಸ್ವಲ್ಪ ಧ್ವನಿ ಏರಿಸುತ್ತಿದ್ದರು. ಪ್ರಯಾಗದಲ್ಲಿ ನಮಗೆ ಪರಿಚಯವಿರುವ ಏಕೈಕ ವ್ಯಕ್ತಿ ರಾಘವೇಂದ್ರ ಆಚಾರ್ ಆಗಿದ್ದರಿಂದ ಅವರ ಪ್ರತಿಯೊಂದು ಮಾತನ್ನೂ ಆದೇಶದಂತೆ ಪಾಲಿಸುವುದು ಅನಿವಾರ್ಯವಾಗಿತ್ತು. ಆದ್ದರಿಂದ ಪ್ರಯಾಣದಿಂದ ಹಾಗೂ ಪ್ರಯಾಗದಲ್ಲಿ ರೂಮಿಗಾಗಿ ಅಲೆದಾಡಿ ಬಳಲಿದ್ದರೂ ತುಲಸೀ ವಿವಾಹಕ್ಕೆ ತೆರಳಿದೆವು.

ಮಾರನೆಯ ದಿನ ಪ್ರಯಾಗದ ಆಜಾದ್ ಪಾರ್ಕ್ ಅಥವಾ ಕಂಪನಿ ಬಾಗ್ ನಲ್ಲಿರುವ ರಾಷ್ಟ್ರೀಯ ಸಂಸ್ಕೃತ ಸಂಸ್ಥಾನದ ಗಂಗಾನಾಥ ಝಾ ಪರಿಸರಕ್ಕೆ ತೆರಳಿ ನಮ್ಮ ವಿದ್ಯಾವಾರಿಧಿ ತರಗತಿಗಳ ಸಂಯೋಜಕ, ಪ್ರೊ. ಲಲಿತ್ ಕುಮಾರ ತ್ರಿಪಾಠಿ ಅವರನ್ನು ಭೇಟಿಯಾದೆವು. ಪ್ರವೇಶಕ್ಕೆ ಬೇಕಾದ ದಾಖಲೆ ಪತ್ರಗಳ ಬಗೆಗೆ ಮಾಹಿತಿಯನ್ನು ಪಡೆದು ಪುನಃ ದಾರಾಗಂಜ್ ಗೆ ಹಿಂದಿರುಗಿದೆವು. ಮಧ್ಯಾಹ್ನಾನಂತರ ಅನೇಕ ಕಡೆಗಳಲ್ಲಿ ರೂಮ್ ಹುಡುಕಿದರೂ ಒಂದೂ ಮನಸ್ಸಿಗೆ ಹಿಡಿಸಲಿಲ್ಲ. ಅಲ್ಲದೇ ನಾನು ವ್ಯವಸ್ಥೆ ಮಾಡುತ್ತೇನೆ ಎಂದು ರಾಘವೇಂದ್ರ ಆಚಾರ್ ಹೇಳಿದ್ದರಿಂದ ಸಿಕ್ಕ ರೂಮಿಗೆ ಹೊಕ್ಕುವ ಅನಿವಾರ್ಯತೆಯೂ ಇರಲಿಲ್ಲ. ಕೊಟ್ಟ ಮಾತಿನಂತೆಯೇ ರಾಘವೇಂದ್ರ ಆಚಾರ್ ಮಠದ ಪಕ್ಕದಲ್ಲೇ ಇದ್ದ ಚಿನ್ನುರಾವ್ ಎಂಬುವವರ ಮನೆಯ ಕೋಣೆಯೊಂದನ್ನು ತೋರಿಸಿದರು. ೧೦X೧೦ ಅಡಿಯ ಒಂದು ಕೋಣೆ ಹಾಗೂ ೧೦X೪ ಅಡಿಯ ಅಡುಗೆ ಕೋಣೆ, ಶೌಚಾಲಯ ಹಾಗೂ ಬಚ್ಚಲು ಮನೆಯಿರುವ ಕೋಣೆಯಾದರೂ ಗೋಡೆಯ ತುಂಬಾ ರೇಕ್ ಗಳಿದ್ದವು. ಬಚ್ಚಲು ಮನೆಯಿಂದ ಕೋಣೆಯನ್ನು ಪ್ರವೇಶಿಸಬೇಕಾದರೂ ೨೪ ಗಂಟೆಯೂ ನೀರಿನ ಲಭ್ಯತೆ ಇರುವುದರಿಂದ ಇಷ್ಟರವರೆಗೆ ನೋಡಿದ ರೂಮುಗಳಿಗಿಂತ ಇದೇ ಪರವಾಗಿಲ್ಲ ಎಂದೆನಿಸಿತು. ಕೋಣೆಯನ್ನು ೨ ದಿನಗಳೊಳಗೆ ಸ್ವಚ್ಛಮಾಡಿ ಕೊಡುತ್ತೇನೆ ಎಂದು ಚಿನ್ನುರಾವ್ ತಿಳಿಸಿದರು. ನಾವೆಷ್ಟೇ ಬೇಡಿಕೊಂಡರೂ ಬಾಡಿಗೆಯ ಮೊತ್ತವನ್ನು ಕಡಿಮೆ ಮಾಡಲು ಒಪ್ಪಲಿಲ್ಲ. ಆದ್ದರಿಂದ ನಾವು ನಾಳೆ ಹೇಳುತ್ತೇವೆ ಎಂದು ೨ ದಿನ ಕಳೆದೆವು. ಅಲ್ಲದೇ ಆ ಕೋಣೆ ಬಾಡಿಗೆಗೆ ನೀಡಲು ಕಟ್ಟಿದ್ದಾಗಿರಲಿಲ್ಲ. ರಾಘವೇಂದ್ರ ಆಚಾರರ ಮೈತ್ರಿಗೆ ಮಣಿದಿದ್ದ ಚಿನ್ನುರಾವ್ ನಮಗೆ ಬಾಡಿಗೆಗೆ ಕೊಡಲು ಒಪ್ಪಿದ್ದರು. ಆದ್ದರಿಂದ ಈ ರೂಮು ನಾವೊಪ್ಪಿದರೆ ನಮಗೇ ದೊರೆಯುತ್ತದೆ, ಬೇರೆಯವರಿಗಂತೂ ಕೊಡುವುದಿಲ್ಲ ಎಂಬ ಭರವಸೆಯಿತ್ತು.

ವಿದ್ಯಾಲಯದಲ್ಲಿ ೮ ನೆಯ ತಾರೀಕಿಗೆ ತರಗತಿಗಳು ಆರಂಭವಾಗುತ್ತವೆ ಇಂದಿನ್ನೂ ೩ ನೆಯ ತಾರೀಕು. ಅಷ್ಟರವರೆಗೆ ಕಡಿಮೆ ಬಾಡಿಗೆಯ ಒಳ್ಳೆಯ ರೂಮು ಸಿಕ್ಕಿದರೆ ಅದಕ್ಕೇ ಹೋದರಾಯಿತು ಎಂದುಕೊಂಡು ಚಿನ್ನುರಾವ್ ಅವರಿಗೆ ಸ್ಪಷ್ಟ ನಿರ್ಧಾರವನ್ನು ತಿಳಿಸಲಿಲ್ಲ.

ನಾವು ತಾತ್ಕಾಲಿಕವಾಗಿ ವಾಸವಾಗಿದ್ದ ಉತ್ತರಾದಿ ಮಠದಲ್ಲಿ ಯಾತ್ರಿಕರು ಉಳಿದುಕೊಳ್ಳುತ್ತಾರೆ. ಯಾತ್ರಿಕರೆಲ್ಲರೂ ಸಾಮಾನ್ಯವಾಗಿ ಪ್ರಯಾಗದ ಪುಣ್ಯಕ್ಷೇತ್ರದಲ್ಲಿ ಪಿಂಡಪ್ರದಾನ ಹಾಗೂ ವೇಣೀದಾನವನ್ನು ಮಾಡಿಸುತ್ತಾರೆ. ವೇಣೀದಾನವೆಂದರೆ ಪ್ರಯಾಗಕ್ಷೇತ್ರದಲ್ಲಿ ಮಾತ್ರ ನಡೆಸಲಾಗುವ ಕ್ಷೇತ್ರವಿಧಿ. ಇದೊಂದು ಶುಭಕಾರ್ಯ. ಹೆಂಡತಿಯ ಜಡೆಯಿಂದ ಸುಮಾರು ೩ ಇಂಚುಗಳಷ್ಟು ಕೂದಲುಗಳನ್ನು ಕತ್ತರಿಸಿ ಸಂಗಮದಲ್ಲಿ ವಿಸರ್ಜಿಸಿ ಪತಿ ಪತ್ನಿಯರು ಪರಸ್ಪರರ ಕೈ ಹಿಡಿದುಕೊಂಡು ಸಂಗಮದಲ್ಲಿ ಸ್ನಾನ ಮಾಡಿದರೆ ವಿಧಿ ಪೂರ್ಣವಾಗುತ್ತದೆ. ಉತ್ತರಾದಿ ಮಠದಲ್ಲಿ ಪ್ರತಿದಿನವೂ ಕ್ಷೌರಿಕನೊಬ್ಬ ಬೆಳಗಿನ ಜಾವ ೬ ಗಂಟೆಗೆ ಬಂದು ಯಾತ್ರಾರ್ಥಿಗಳ ಕ್ಷೌರವನ್ನು ಮಾಡುತ್ತಾನೆ. ಸಾಮಾನ್ಯವಾಗಿ ಮಠದ ಕೊಠಡಿಗಳಲ್ಲಿ ಉಳಿಯುವವರೆಲ್ಲರೂ ಪಿಂಡಪ್ರದಾನ ಮಾಡುವುದರಿಂದ ಎಲ್ಲ ಕೊಠಡಿಗಳಿಗೂ ತೆರಳಿ "ಆಪ್ ಕಾ ಶ್ರಾದ್ಧ್ ಹೈ ಕ್ಯಾ" ಎಂದು ಕೇಳುತ್ತಿದ್ದ. ಆತ ಅಭ್ಯಾಸದಂತೆ ನಮ್ಮ ಕೊಠಡಿಗೂ ಬಂದು "ಆಪ್ ಕಾ ಶ್ರಾದ್ಧ್ ಹೈ ಕ್ಯಾ" ಎಂದು ಕೇಳಿದಾಗ ಆಗಷ್ಟೇ ನಿದ್ದೆಯಿಂದೆದ್ದ ಎಲ್ಲರೂ ಒಂದು ಕ್ಷಣ ಅವಾಕ್ಕಾದೆವು. ತದನಂತರ ನಾವು ಇಲ್ಲಿರುವ ಕಾರಣವನ್ನು ತಿಳಿಸಿ ಆತನನ್ನು ಸಾಗಹಾಕಿದೆವು.

ನಾವು ವಾಸವಾಗಿದ್ದ ಪ್ರಯಾಗದ ದಾರಾಗಂಜ್ ಗಂಗಾ ಯಮುನಾ ಸರಸ್ವತೀ ಸಂಗಮದಿಂದ ಕೇವಲ ೨ ಕಿಮೀ ದೂರದಲ್ಲಿತ್ತು. ಆದ್ದರಿಂದ ಪ್ರಯಾಗದ ವಾತಾವರಣಕ್ಕೆ ಒಗ್ಗಿಕೊಳ್ಳದಿದ್ದರೂ, ವಾಸ್ತವ್ಯಕ್ಕೆ ಸ್ಥಳ ನಿಗದಿಯಾಗದಿದ್ದರೂ ಪುಣ್ಯಸಂಗಮದ ದರ್ಶನಕ್ಕೆ ಮನಸ್ಸು ಹಾತೊರೆಯುತ್ತಿತ್ತು. ಸಂಗಮದ ದರ್ಶನಕ್ಕಾಗಿ ನವಂಬರ್ ೪ ರ ಸಾಯಂಕಾಲ ೪.೧೫ ಕ್ಕೆ ಹೊರಟೆವು. ೫.೧೫ ರ ವೇಳೆಗೆ ಸೂರ್ಯನ ಬೆಳಕು ಮಂದವಾಗುವುದರಿಂದ ಸಂಗಮಕ್ಕೆ ಹೋಗುವಾಗ ರಿಕ್ಷಾದಲ್ಲಿ ತೆರಳಿ ಬರುವಾಗ ನಡೆದುಕೊಂಡು ಬರುವುದೆಂದು ತೀರ್ಮಾನವಾಯಿತು. ಆದರೆ ಅದೃಷ್ಟವೋ ಎಂಬಂತೆ ಸುಮಾರು ಅರ್ಧ ಕಿಮೀ ನಡೆದರೂ ಯಾವುದೇ ಆಟೋ ಸಿಗಲಿಲ್ಲ. ಸಂಗಮ ಸ್ಥಾನದಿಂದ ಸುಮಾರು ಒಂದೂವರೆ ಕಿಮೀ ದೂರವನ್ನು ಗಂಗಾ ಯಮುನಾ ನದಿಗಳ ಮಧ್ಯದಲ್ಲಿ ಮರಳಿನ ಮೇಲೆ ನಡೆಯಬೇಕು. ಸಂಗಮ ಸ್ಥಾನದವರೆಗೆ ಯಾವ ಆಟೋ ಕೂಡಾ ಹೋಗಲಾರದು. ಕೆಲವು

ಸಾಹಸೀ ಬೈಕ್ ಸವಾರರು ಸಂಗಮಸ್ಥಾನದವರೆಗೂ ಮರಳಿನಲ್ಲೇ ಬೈಕ್ ತಂದು ಬೈಕಿಗೂ ಸಂಗಮ ದರ್ಶನ ಮಾಡಿಸುತ್ತಾರಷ್ಟೇ. ನಾವು ಸಂಗಮಕ್ಕೆ ಹೋದ ದಿನ ಕಾರ್ತಿಕ ಮಾಸದ ಹುಣ್ಣಿಮೆಯಾಗಿತ್ತು. ಈ ವಿಶೇಷ ದಿನದಂದು ಪ್ರಯಾಗದ ಸುತ್ತಮುತ್ತಲ ಹಳ್ಳಿಗಳಿಂದ ತಂಡೋಪತಂಡವಾಗಿ ಆಗಮಿಸಿದ್ದ ಜನರು ಸಂಗಮ ಕ್ಷೇತ್ರದಲ್ಲಿ ಹಣತೆಗಳನ್ನು ಹೊತ್ತಿಸುವುದಕ್ಕೆ ಸೂರ್ಯಾಸ್ತವಾಗುವುದನ್ನೇ ಕಾಯುತ್ತಿದ್ದರು. ನಾವು ನಡೆದುಕೊಂಡು ಹೋಗುವಾಗ ತುಸು ತಡವಾಗಿ ಕತ್ತಲಾದುದರಿಂದ ಸಂಗಮದ ದರ್ಶನ ಸ್ಪಷ್ಟವಾಗಿ ಆಗಲಿಲ್ಲ. ಆದರೆ ಕಾರ್ತಿಕ ಹುಣ್ಣಿಮೆಯ ದಿನ ಹೋಗಿದ್ದರಿಂದ ಗಂಗಾ ಯಮುನಾ ನದಿಗಳ ಮಧ್ಯದಲ್ಲಿ ಉರಿಯುತ್ತಿದ್ದ ಲಕ್ಷಕ್ಕೂ ಹೆಚ್ಚಿನ ದೀಪಗಳನ್ನು ನೋಡುವ ಭಾಗ್ಯ ಲಭಿಸಿತು. ಹೀಗೆ ಪುಣ್ಯ ಸಂಗಮದ ದರ್ಶನದಿಂದ ಕೃತಾರ್ಥರಾಗಿ ಮಠಕ್ಕೆ ಹಿಂದಿರುಗಿದೆವು.

ಮೊದಲೇ ತಿಳಿಸಿದಂತೆ ನವಂಬರ್ ೫ ರಂದು ನೆಟ್ ಪರೀಕ್ಷೆಯಿತ್ತು. ನಮ್ಮ ನೆಟ್ ಪರೀಕ್ಷೆಯ ಕೇಂದ್ರ ನಾವು ವಾಸವಾಗಿದ್ದ ದಾರಾಗಂಜ್ ನಿಂದ ೧೨ ಕಿಮೀ ದೂರದ ಪಫಮಾವು ಎಂಬ ಸ್ಥಳದಲ್ಲಿತ್ತು. ೯ ಗಂಟೆಗೆ ಪರೀಕ್ಷಾ ಕೇಂದ್ರವನ್ನು ತಲುಪಬೇಕಾದ್ದರಿಂದ ಬೆಳಿಗ್ಗೆ ೭.೩೦ ಕ್ಕೆ ಸ್ನಾನ ಮುಗಿಸಿ ನಾನು, ರವಿಶಂಕರ, ಗಣೇಶಪ್ರಸಾದ ನೆಟ್ ಪರೀಕ್ಷೆಗೆ ಹೊರಟೆವು. ಬಾಡಿಗೆ ಆಟೋವೊಂದರಲ್ಲಿ ೮.೪೦ ಕ್ಕೆ ಪರೀಕ್ಷಾ ಕೇಂದ್ರಕ್ಕೆ ತಲುಪಿದೆವು. ನಾನು ತೊಡುವ ಬಟ್ಟೆಗಳ ವಿಚಾರದಲ್ಲಿ ನನಗೆ ಮೊದಲಿನಿಂದಲೂ ಅಷ್ಟಾಗಿ ಆಸಕ್ತಿಯಿಲ್ಲ. ಅಸಡ್ಡೆಯೆಂದೇ ಹೇಳಬಹುದು. ಇಸ್ತ್ರಿ ಹಾಕಿದ ಬಟ್ಟೆಗಳನ್ನು ತೊಡುವುದೆಂದರೆ ಅಲರ್ಜಿ. ಹೀಗಾಗಿ ಕೈಗೆ ಸಿಕ್ಕಿದ ಟೀಶರ್ಟ್ ತೊಟ್ಟು ಲುಂಗಿ ಉಟ್ಟು ಪರೀಕ್ಷೆಗೆ ಹೊರಟಿದ್ದೆ. ಪರೀಕ್ಷೆಯ ಒತ್ತಡದಿಂದಲೋ ಮುಂಜಾನೆಯ ಮಬ್ಬು ಬೆಳಕಿನಿಂದಲೋ ಗೆಳೆಯರೂ ಇದನ್ನು ಗಮನಿಸಿರಲಿಲ್ಲ. ಆದ್ದರಿಂದ ಪರೀಕ್ಷಾಕೇಂದ್ರದೊಳಗೆ ನನ್ನನ್ನು ಬಿಡುವ ಮುನ್ನ ನಾನು ಪರೀಕ್ಷಾರ್ಥಿಯೋ ಭಯೋತ್ಪಾದಕನೋ ಎಂದು ಅನೇಕ ಬಾರಿ ಐಡಿ ಕಾರ್ಡ್ ನೋಡಿ ಖಚಿತಪಡಿಸಿಕೊಂಡರು. ಸಂಜೆ ಪರೀಕ್ಷೆ ಬರೆದು ವಾಪಾಸ್ಸಾಗುವಾಗ ೧೨ ಕಿಮೀ ದೂರವನ್ನು ೩ ಶೇರ್ ಆಟೋಗಳ ಮೂಲಕ ಪ್ರಯಾಣಿಸಿದೆವು. ದಾರಾಗಂಜ್ ನ ಬಟ್ಟೆ ಅಂಗಡಿಯೊಂದರ ಮಾಲಕ ಅನಿರುದ್ಧ ಶುಕ್ಲ ಶೇರ್ ಆಟೋದ ಮಾರ್ಗ ಹಾಗೂ ಪ್ರಯಾಣಕ್ರಮವನ್ನು ಸ್ಪಷ್ಟವಾಗಿ ವಿವರಿಸಿದ್ದರು.

ನವಂಬರ್ ೬ ನೆಯ ತಾರೀಕಿನಂದು ನಮ್ಮ ೬ ತಿಂಗಳ ಪ್ರಯಾಗ ವಾಸವನ್ನು ಚಿನ್ನುರಾವ್ ನ ಮನೆಯ ಕೋಣೆಯಲ್ಲೇ ಹೂಡುವುದೆಂದು ನಿಶ್ಚಯಿಸಿ ರೂಮ್ ಸೆಟ್

ಮಾಡಲಾರಂಭಿಸಿದೆವು. ನಮ್ಮ ಬಳಿ ಆರು ತಿಂಗಳ ಮಟ್ಟಿಗೆ ಅನಿವಾರ್ಯವಾಗಿ ಬೇಕಾದ ವಸ್ತುಗಳಷ್ಟೇ ಇದ್ದವು. ರೂಮ್ ಸ್ವಚ್ಛ ಮಾಡಿ, ಬಟ್ಟೆ ಒಣಗಿಸಲು ಹಗ್ಗಗಳನ್ನು ಕಟ್ಟಿ, ಕಸದ ಬುಟ್ಟಿಗಳ ವ್ಯವಸ್ಥೆ ಮಾಡಿ, ವಸ್ತುಗಳನ್ನು ಜೋಡಿಸಿಡುವಾಗಲೇ ದಿನವೊಂದು ಕಳೆದಿತ್ತು. ಅಡುಗೆ ಸಾಮಾನುಗಳನ್ನು ಕ್ರಮಬದ್ಧವಾಗಿ ಜೋಡಿಸುವ ಕೆಲಸ ಹಾಗೆಯೇ ಉಳಿದಿತ್ತು. ಸದಾ ವರ್ಗಾವಣೆಯಾಗುತ್ತಲೇ ಇರುವ ಉದ್ಯೋಗಿಗಳು ತಮ್ಮ ವಾಸ್ತವ್ಯವನ್ನು ಬದಲಾಯಿಸುವ ಬಗೆಗೆ ಯೋಚಿಸಿದಾಗ ಸೋಜಿಗವುಂಟಾಯಿತು. ನವೆಂಬರ್ ೮ ರಿಂದ ೩ ದಿನಗಳ ಕಾಲ ವಿದ್ಯಾಲಯದಲ್ಲಿ ತರಗತಿಗಳು ನಡೆದವು.

ಒಂದು ದಿನ ಸಂಜೆಯ ವೇಳೆಗೆ ಪ್ರಯಾಗದ ನಾಗವಾಸುಕೀ ಮಂದಿರದ ದರ್ಶನವನ್ನು ಮಾಡಬೇಕೆಂದು ನಿಶ್ಚಯಿಸಿದೆವು. ಗಣೇಶಪ್ರಸಾದ ಹಾಗೂ ರವಿಶಂಕರನಿಗೆ ಸ್ವಲ್ಪಮಟ್ಟಿನ ಅನಾರೋಗ್ಯವಿದ್ದುದರಿಂದ ನಾನು, ಮುರಳಿಕೃಷ್ಣ ಹಾಗೂ ಗಣೇಶ ಮಂದಿರಕ್ಕೆ ಹೊರಟೆವು. ಗಂಗಾನದಿಯ ತೀರದಲ್ಲಿ ೨ ಕಿಮೀ ದೂರ ನಡೆದರೆ ನಾಗವಾಸುಕೀ ಮಂದಿರವಿದೆ ಎಂಬ ಸೂಚನಾಫಲಕವನ್ನು ನೋಡಿ ಗಂಗಾನದಿಯ ತೀರದಲ್ಲಿ ನಡೆಯಲಾರಂಭಿಸಿದೆವು. ಕತ್ತಲಾಗಿದ್ದರೂ ಕೂಡಾ ಅನೇಕ ಕಡೆಗಳಲ್ಲಿ ಡ್ರೈನೇಜ್ ನೀರು ಗಂಗಾನದಿಯನ್ನು ಸೇರುವುದು ಸ್ಪಷ್ಟವಾಗಿ ಕಾಣುತ್ತಿತ್ತು. ಕೆಲವೆಡೆಯಂತೂ ರಸ್ತೆಯ ಮೇಲೆಲ್ಲಾ ಕೊಳಚೆ ತುಂಬಿ ನಡೆಯಲು ಅಸಹ್ಯವಾಗುತ್ತಿತ್ತು. ಸ್ವಚ್ಛ ಭಾರತ, ನಮಾಮಿ ಗಂಗೆ ಮೊದಲಾದ ಯೋಜನೆಗಳು ಜಾರಿಯಾದ ನಂತರವೂ ಈ ಸ್ಥಿತಿಯಾದರೆ ಅದಕ್ಕಿಂತ ಮೊದಲಿನ ಪರಿಸ್ಥಿತಿ ಹೇಗಿದ್ದಿರಬಹುದೆಂದು ಕಲ್ಪಿಸಿಕೊಳ್ಳುವುದೂ ಕಷ್ಟವಾಯಿತು. ನಾಗವಾಸುಕೀ ಮಂದಿರದ ದರ್ಶನ ಮಾಡಿ ಬೇರೊಂದು ಮಾರ್ಗದಲ್ಲಿ ಹಿಂದಿರುಗಿದೆವು.

ಹುಟ್ಟೂರಿನಿಂದ ಸುಮಾರು ಎರಡುಸಾವಿರ ಕಿಮೀ ದೂರದಲ್ಲಿರುವುದರಿಂದ ಪ್ರಯಾಗದ ಸುತ್ತಮುತ್ತಲಿನ ಪ್ರೇಕ್ಷಣೀಯ ಸ್ಥಳಗಳನ್ನು ಸಂದರ್ಶಿಸಬೇಕೆಂಬುದು ನಮ್ಮ ಸಂಕಲ್ಪವಾಗಿತ್ತು. ಊರಿನ ಅಥವಾ ಶೃಂಗೇರಿಯ ಸುತ್ತಮುತ್ತಲಿನ ಪ್ರೇಕ್ಷಣೀಯ ಸ್ಥಳಗಳನ್ನೇ ನೋಡದಿದ್ದರೂ ಪ್ರಯಾಗದ ಸುತ್ತಮುತ್ತಲಿನ ಸ್ಥಳಗಳನ್ನು ನೋಡುವ ಹುಚ್ಚು ಮನಸ್ಸಿನಲ್ಲಿತ್ತು. ಹಿಂದಿನ ವರ್ಷ ಪ್ರಯಾಗದಲ್ಲಿದ್ದ ಗೆಳೆಯರೂ ಅನೇಕ ಸ್ಥಳಗಳನ್ನು ಸಂದರ್ಶಿಸಿ ತಮ್ಮ ಉತ್ತರ ಭಾರತದ ವಾಸವನ್ನು ಸಾರ್ಥಕಪಡಿಸಿಕೊಂಡಿದ್ದರು. ಪ್ರಯಾಗದಿಂದ ೩ ಗಂಟೆಗಳಷ್ಟು ದೂರದಲ್ಲಿರುವ ಕಾಶಿಗೆ ತೆರಳಬೇಕು ಎಂಬುವುದು ನಮ್ಮೆಲ್ಲರ ಒಕ್ಕೊರಲಿನ ನಿರ್ಣಯವಾಗಿತ್ತು. ನಮ್ಮೊಂದಿಗಿರುವ ಮಿತ್ರ ಮುರಳಿಕೃಷ್ಣನ ತಂದೆ ಕೇರಳದ ಪ್ರಖ್ಯಾತ ಜ್ಯೋತಿಷಿಗಳಾದ್ದರಿಂದ ಆತನಿಗೆ ಉತ್ತರ

ಭಾರತದ ಪ್ರಸಿದ್ಧ ಕ್ಷೇತ್ರಗಳಲ್ಲಿ ಒಂದು ದಿನದ ಮಟ್ಟಿಗೆ ವಾಸ್ತವ್ಯದ ವ್ಯವಸ್ಥೆ ಮಾಡುವ ಸಾಮರ್ಥ್ಯವಿತ್ತು. ಶುಕ್ರವಾರ ಸಂಜೆ ಯಾರದೋ ಸಂಪರ್ಕದಿಂದ ಕಾಶಿಯಲ್ಲಿನ ಗೋಕರ್ಣ ಮೂಲದ ಚಿಂತಾಮಣಿ ಭಟ್ಟರನ್ನು ಸಂಪರ್ಕಿಸಿದಾಗ ಈ ವಾರ ಕಾಶಿಯಲ್ಲಿ ರಶ್ ಇದೆ, ಇನ್ನೊಮ್ಮೆ ಯಾವಾಗಲಾದರೂ ಬನ್ನಿ ಎಂದರು. ಅನನ್ಯಗತಿಕರಾಗಿ ಶನಿವಾರ ಪ್ರಯಾಗದಿಂದ ೨ ಗಂಟೆಗಳಷ್ಟು ದೂರವಿರುವ ಶಕ್ತಿಪೀಠವಾದ ವಿಂಧ್ಯಾಚಲಕ್ಕೆ ತೆರಳುವುದೆಂದು ತೀರ್ಮಾನಿಸಿದೆವು. ಆದರೆ "ಆಲಸ್ಯಂ ಹಿ ಮನುಷ್ಯಾಣಾಂ ಶರೀರಸ್ಥೋ ಮಹಾನ್ ರಿಪುಃ" ಎಂಬ ಮಾತಿನಂತೆ ಆಲಸ್ಯವೇ ದೊಡ್ಡ ಶತ್ರುವಾಯಿತು. ಬೆಳಗಿನ ಸ್ನಾನ ತಿಂಡಿಗಳು ಮುಗಿಯುವುದರೊಳಗೇ ಗಂಟೆ ಹತ್ತಾಯಿತು. ವಿಂಧ್ಯಾಚಲಕ್ಕೆ ಇಂದು ಹೋಗುವುದು ಬೇಡ, ನಾಳೆ ಹೋಗುವುದೆಂದು ತೀರ್ಮಾನವಾಯಿತು. ಆ ದಿನ ರೂಮ್ ಸೆಟ್ ಆಗಿದ್ದರೂ ಪುನಃ ರೂಮ್ ಸೆಟ್ ಮಾಡಿದೆವು. ರೈಲಿನಲ್ಲಿ ಕೊಂಡ ನೀರಿನ ಬಾಟಲಿಗಳನ್ನು ಅರ್ಧಕ್ಕೆ ಕತ್ತರಿಸಿ ಅದರಲ್ಲಿ ಬೇಳೆ, ಶೇಂಗಾ ಮುಂತಾದ ವಸ್ತುಗಳನ್ನಿಟ್ಟರೆ ಡಬ್ಬಿಗಳ ಅವಶ್ಯಕತೆ ಇರುವುದಿಲ್ಲ. ವಾಪಾಸ್ಸಾಗುವಾಗ ಲಗೇಜ್ ಸಹ ಕಡಿಮೆಯಾಗುತ್ತದೆ. ಎಂದು ಗಣೇಶ್ ಕೃಷ್ಣ ಸಲಹೆಯನ್ನಿತ್ತಿದ್ದ. ನಮ್ಮ ಮನೆಯ ಮಾಲಕ ಚಿನ್ನುರಾವ್ ಬಾಡಿಗೆಯ ಮೊತ್ತದಲ್ಲಿ ಒಂದು ಪೈಸೆ ಕಡಿಮೆ ಮಾಡದಿದ್ದರೂ ಕೇಳಿದ ವಸ್ತುಗಳನ್ನೆಲ್ಲ ನೀಡಿದ್ದರು. ಹಣದ ವಿಷಯದಲ್ಲಿ ಜಿಪುಣನಾದರೂ ಉಳಿದೆಲ್ಲ ವಿಷಯಗಳಲ್ಲಿ ಅಗತ್ಯಕ್ಕಿಂತ ಹೆಚ್ಚು ಎನ್ನುವಷ್ಟೇ ಧಾರಾಳಿಯಾಗಿದ್ದರು. ಆದ್ದರಿಂದ ಬಾಲ್ದಿ, ಪೊರಕೆ ಮೊದಲಾದ ವಸ್ತುಗಳನ್ನು ಕೊಳ್ಳುವ ಪ್ರಸಂಗ ಎದುರಾಗಲಿಲ್ಲ. ಅಂತೂ ಇಂತೂ ಶನಿವಾರದ ಅರ್ಧ ದಿವಸ ಮುಗಿದಾಗ ಎಲ್ಲರಿಗೂ ತೃಪ್ತಿಯಾಗುವಷ್ಟು 'ರೂಮ್ ಸೆಟ್' ಆಗಿತ್ತು.

ನಾವಿದ್ದ ರೂಮಿನಿಂದ ೨೦೦ ಮೀಟರ್ ದೂರದಲ್ಲಿ ಗಂಗಾ ನದಿಯಿತ್ತು. ಗಂಗೆಯ ತೀರದ ಪುಣ್ಯಕ್ಷೇತ್ರಕ್ಕೆ ಬಂದುಳಿದು ವಾರವೊಂದು ಕಳೆದಿದ್ದರೂ ಗಂಗಾನದಿಯಲ್ಲಿ ಪುಣ್ಯಸ್ನಾನ ಮಾಡಿರಲಿಲ್ಲ. ಆದರೆ ಮೊದಲಿಗೆ ಸಂಗಮ ಸ್ನಾನವನ್ನೇ ಮಾಡೋಣ ಎಂದುಕೊಂಡು ಶನಿವಾರದ ಸಂಜೆ ಸಂಗಮಕ್ಷೇತ್ರಕ್ಕೆ ಹೊರಟೆವು. ಗಣೇಶನಿಗೆ ಆಗಲೇ ಜ್ವರ ಬರುವ ಸೂಚನೆಯಿದ್ದುದರಿಂದ ತಾನು ಬರುವುದಿಲ್ಲವೆಂದ. ರವಿಶಂಕರ ಬರುತ್ತೇನೆಂದರೂ ಹೊರಡುವ ಸೂಚನೆ ಕಾಣಲಿಲ್ಲ. ಆದ್ದರಿಂದ ನಾನು, ಗಣೇಶಪ್ರಸಾದ, ಮುರಳಿಕೃಷ್ಣ ಸಂಗಮಸ್ನಾನಕ್ಕೆ ಹೊರಟೆವು. ಒಂದು ಬಾರಿ ಸಂಗಮದ ದರ್ಶನ ಮಾಡಿದ್ದರೂ ಸ್ನಾನ ಮಾಡುತ್ತೇವೆ ಎಂಬ ಪುಳಕ ವಿಶಿಷ್ಟವಾಗಿತ್ತು. ದೋಣಿಗಳ ಮೂಲಕ ಸಂಗಮಕ್ಕೆ ಕೊಂಡೊಯ್ಯುವವ ನಾವಿಕರು ಸುಲಭವಾಗಿ ನಮ್ಮ ದಿಕ್ಕು

ತಪ್ಪಿಸಿದರು. ಸಂಗಮಕ್ಕೆ ನಡೆದುಕೊಂಡು ಹೋಗಲು ಸಾಧ್ಯವೇ ಇಲ್ಲ ಎಂಬ ಅವರ ವಾದ ನಿಜವಾಗಿರಬಹುದೇನೋ ಎಂದೆನಿಸಿ ದೋಣಿಯೊಂದರಲ್ಲಿ ಕುಳಿತೆವು. ಆತನ ದೋಣಿ ಹಿಂದಿನ ವಾರ ನಾವು ನೋಡಿದ್ದ ಜಾಗದತ್ತಲೇ ಹೋಗುತ್ತಿದ್ದಾಗ ನಿರಾಶೆಯಾದರೂ, ಅಂಬಿಗ ಎರಡು ನದಿಗಳ ಸಂಗಮ ರೇಖೆಯನ್ನು ತೋರಿಸಿದ್ದು ಖುಷಿ ತಂದಿತು. ಸಂಗಮ ಸ್ನಾನದ ಸಂದರ್ಭದಲ್ಲಿ ಗಂಗಾನದಿಯ ನೀರು ತಂಪು ಹಾಗೂ ಯಮುನಾ ನದಿಯ ನೀರು ಬಿಸಿ ಎಂಬ ಭೇದ ಸ್ಪಷ್ಟವಾಗಿ ತಿಳಿಯುತ್ತಿತ್ತು. ಅಲ್ಲದೇ ಗಂಗೆ ವಿಶಾಲವಾಗಿದ್ದರೂ ಆಳವಾಗಿರಲಿಲ್ಲ. ಯಮುನೆ ಆಳವಾಗಿದ್ದರೂ ವಿಶಾಲವಾಗಿರಲಿಲ್ಲ.

ಸ್ನಾನ ಮುಗಿಸಿದಾಗ ಕತ್ತಲಾಗಿದ್ದರೂ ಪಕ್ಕದಲ್ಲಿನ ಕೋಟೆಯನ್ನು ಸ್ಥೂಲವಾಗಿ ವೀಕ್ಷಿಸೋಣ ಎಂದುಕೊಂಡು ಕೋಟೆಯೆಡೆಗೆ ಹೆಜ್ಜೆಯನ್ನಿತ್ತೆವು. ಕೋಟೆಯೊಳಗಿನ ಅಕ್ಷಯವಟದ ಇತಿಹಾಸವನ್ನು ತಿಳಿದಾಗ ಅಚ್ಚರಿಯಾಯಿತು. ಕೃತಯುಗದಿಂದಲೂ ನೆಲೆಯಾಗಿರುವ ಈ ಅಕ್ಷಯವಟದ ಬಳಿ ದೇವತೆಗಳು ವರ ಬೇಡುತ್ತಿದ್ದರಂತೆ. ರಾಮ ತನ್ನ ತಂದೆಗೆ ಇದೇ ವೃಕ್ಷದಡಿಯಲ್ಲಿ ಮೊದಲ ಪಿಂಡಪ್ರದಾನ ಮಾಡಿದ್ದನಂತೆ. ಹಿಂದೂಗಳು ಪೂಜಿಸುವ ಈ ವೃಕ್ಷವನ್ನು ನಾಶಪಡಿಸಲು ಔರಂಗಜೇಬ ಎಷ್ಟೇ ಪ್ರಯತ್ನಪಟ್ಟರೂ ವೃಕ್ಷ ಮತ್ತೆ ಮತ್ತೆ ಚಿಗುರಿಕೊಳ್ಳುತ್ತಿತ್ತಂತೆ. ಮೋಕ್ಷದ ಆಸೆಯಿಂದ ಭಕ್ತರು ಅಕ್ಷಯವಟದಿಂದ ಯಮುನೆಗೆ ಹಾರಿ ತಮ್ಮ ಪ್ರಾಣ ಕಳೆದುಕೊಳ್ಳುತ್ತಿದ್ದ ಪದ್ಧತಿಯನ್ನು ಬ್ರಿಟಿಷರು ನಿಷೇಧಿಸಿದರಂತೆ. ಈ ಇತಿಹಾಸವನ್ನು ಕೇಳುತ್ತಾ ವಿಶಿಷ್ಟವಾದ ವೃಕ್ಷದ ದರ್ಶನ ಪಡೆದು ದಾರಿಯಲ್ಲಿದ್ದ 'ಸೋಯಾ ಹುವಾ ಬಡಾ ಹನುಮಾನ್' ಮಂದಿರವನ್ನೂ ಹೊಕ್ಕೆವು. ಶನಿವಾರವಾದ್ದರಿಂದ ಅರ್ಧ ಗಂಟೆ ಸರತಿ ಸಾಲಿನಲ್ಲಿ ನಿಂತ ನಂತರ ಆಂಜನೇಯನ ದರ್ಶನವಾಯಿತು.

ಮೊದಲೇ ನಿರ್ಣಯಿಸಿದಂತೆ ಮರುದಿನ ಮುಂಜಾನೆ ವಿಂಧ್ಯಾಚಲಕ್ಕೆ ಹೊರಟೆವು. ಪ್ರಯಾಗದಿಂದ ೧೦೦ ಕಿಮೀ ದೂರದಲ್ಲಿ ವಿಂಧ್ಯಾಚಲವಿದೆ. ವಿಂಧ್ಯಾಚಲ ಎಂಬ ಹೆಸರನ್ನು ಕೇಳಿ ಬೆಟ್ಟವಿರಬಹುದು ಎಂದುಕೊಂಡಿದ್ದ ನಮಗೆ ಅಲ್ಲಿ ಬೆಟ್ಟವಿಲ್ಲದ್ದನ್ನು ಕಂಡು ಅಚ್ಚರಿಯಾಯಿತು. ಅಲ್ಲಿನ ದೇವೀ ದೇವಸ್ಥಾನ ಅತ್ಯಂತ ಜನಜಂಗುಳಿಯಿರುವ ಪ್ರದೇಶ. ಅಲ್ಲದೇ ನವಂಬರ್, ಡಿಸೆಂಬರ್, ಜನವರಿ ತಿಂಗಳುಗಳಲ್ಲಿ ಶಾಲಾ ಪ್ರವಾಸಗಳು ನಮ್ಮಂತಹ ಸಾಮಾನ್ಯ ಪ್ರವಾಸಿಗರನ್ನು ಮತ್ತಷ್ಟು ತೊಂದರೆಗೊಳಪಡಿಸುತ್ತವೆ. ಜನಜಂಗುಳಿಯಲ್ಲೇ ದೇವಿಯ ದರ್ಶನ ಪಡೆದು ಸಮೀಪದಲ್ಲಿನ ಅಷ್ಟಭುಜಾದೇವೀ ಮಂದಿರಕ್ಕೆ ತೆರಳಿದೆವು. ಸುಮಾರು ೨೦೦ ಮೆಟ್ಟಿಲುಗಳನ್ನು ಹತ್ತಿ ಹೋದರೆ ಸಿಗುವ ಮಂದಿರವನ್ನು ಬಗ್ಗಿಕೊಂಡು ಪ್ರವೇಶಿಸಬೇಕು.

ಮಂದಿರದ ಒಳಭಾಗ ಕೇವಲ ನಾಲ್ಕು ಅಡಿ ಎತ್ತರದಲ್ಲಿದೆ. ಪಕ್ಕದಲ್ಲೇ ರಾಮ ಸೀತೆಯರ ವಾಸ್ತವ್ಯದ ಕುರುಹಾದ ಸೀತಾಕುಂಡ ಕಾಣಸಿಗುತ್ತದೆ. ಪರ್ವತದ ಮೇಲಿನ ಆಶ್ರಮವೊಂದರಲ್ಲಿ ವರ್ಷದ ೩೬೫ ದಿನಗಳಲ್ಲೂ ದಿನದ ೨೪ ಗಂಟೆಯೂ "ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ" ಎಂಬ ಜಪದ ಪಾರಾಯಣ ನಿರಂತರವಾಗಿ ನಡೆಯುತ್ತಿರುತ್ತದೆ. ವಿಂಧ್ಯಾಚಲದ ಪರಿಸರದಲ್ಲೇ ಇರುವ ಕಾಲೀಮಾತೆಯ ದರ್ಶನವನ್ನೂ ಪಡೆದು ಸಂಜೆಯ ವೇಳೆಗೆ ಬಸ್ಸನ್ನೇರಿ ಪ್ರಯಾಗಕ್ಕೆ ಮರಳಿದೆವು.

ಶೃಂಗೇರಿಯಲ್ಲಿನ ನಮ್ಮ ವಿದ್ಯಾಪೀಠದಲ್ಲಿ ಮಧ್ಯಾಹ್ನದ ಊಟವನ್ನು ಮಠದಿಂದ ಕಾಲೇಜಿಗೆ ಕಳುಹಿಸುತ್ತಾರೆ. ಹೀಗಾಗಿ ಶಾರದಾ ಪ್ರಸಾದವನ್ನು ಉಂಡು ಹಾಯಾಗಿದ್ದೆವು. ನಾನಂತೂ ಶಾರದಾ ಪ್ರಸಾದದ ಪ್ರಭಾವದಿಂದ ದಷ್ಟಪುಷ್ಟವಾಗಿ ಬೆಳೆದಿದ್ದೆ. ಆದರೆ ಪ್ರಯಾಗದಲ್ಲಿ ಮಧ್ಯಾಹ್ನದ ಊಟದ ವಿಷಯವನ್ನೂ ಚಿಂತಿಸಬೇಕಾಗಿತ್ತು. ಉತ್ತರ ಭಾರತದ ಹೋಟೇಲುಗಳಲ್ಲಿ ಪ್ರತಿದಿನ ಉಣ್ಣುವುದಂತೂ ಕಷ್ಟಸಾಧ್ಯ. ಮಧ್ಯಾಹ್ನಕ್ಕೆ ಬುತ್ತಿ ಒಯ್ಯುವುದು ಅನಿವಾರ್ಯವಾಗಿತ್ತು. ಬುತ್ತಿ ಒಯ್ಯುವ ಬಗ್ಗೆಯೂ ಹಿಂದಿನ ವರ್ಷ ಇಲ್ಲಿದ್ದ ಮಿತ್ರರು ಉಪಾಯವೊಂದನ್ನು ಹೇಳಿಕೊಟ್ಟಿದ್ದರು. ಪಲಾವ್, ವಾಂಗಿ ಬಾತ್, ಚಿತ್ರಾನ್ನ, ಟೊಮೇಟೋ ಬಾತ್ ಮುಂತಾದುವುಗಳನ್ನು ಮಾಡಿ ದೊಡ್ಡ ಡಬ್ಬಿಯಲ್ಲಿ ಒಯ್ಯುವುದು ಪ್ರತ್ಯೇಕವಾಗಿ ಸಣ್ಣ ಸಣ್ಣ ಬುತ್ತಿಗಳನ್ನು ಒಯ್ಯುವುದಕ್ಕಿಂತ ಅನುಕೂಲಕರ ಎಂದು ತಿಳಿಸಿದ್ದರು. ಕರ್ನಾಟಕ ಸರ್ಕಾರ ಹಾಗೂ ಶೃಂಗೇರಿ ಮಠದ ಕೃಪೆಯಿಂದ ಬಾಲ್ಯದಿಂದಲೂ ಬುತ್ತಿಯುಣ್ಣುವ ಕಲ್ಪನೆಯೇ ಇರಲಿಲ್ಲ. ನಮ್ಮ ಮಿತ್ರರು ಹೇಳಿಕೊಟ್ಟ ಉಪಾಯವನ್ನು ನಾವು ಅಪ್ ಗ್ರೇಡ್ ಮಾಡಿದೆವು. ಹಿಂದಿನ ದಿನದ ರಾತ್ರಿ ಸಾಂಬಾರ್ ಮಾಡಿಕೊಂಡರೆ ಬೆಳಿಗ್ಗೆ ಅನ್ನ ಮಾಡಿ ಅನ್ನ ಸಾಂಬಾರ್ ಒಯ್ಯುವುದು. ಬಾತ್ ಗಳನ್ನು ಮಾಡುವುದಾದರೆ ಬೆಳಗಿನ ತಿಂಡಿಗೂ ಮಧ್ಯಾಹ್ನಕ್ಕೂ ಸೇರಿ ಮಾಡುವುದು. ಸಾಂಬಾರು ಮಾಡಿದ ಮರುದಿನ ತಿಂಡಿಗೆ ದೋಸೆ, ಅವಲಕ್ಕಿ, ಉಪ್ಪಿಟ್ಟುಗಳನ್ನು ಮಾಡುವುದು. ಇದರಿಂದ ಅಡುಗೆ ಮಾಡುವ ಸಮಯದ ಉಳಿತಾಯವಾಗುತ್ತಿತ್ತು. ಗೆಳೆಯರಾದ ಗಣೇಶ ಹಾಗೂ ಗಣೇಶಪ್ರಸಾದ ಅಡುಗೆಯಲ್ಲಿ ಸಿದ್ಧಹಸ್ತರಾಗಿದ್ದರು. ಆದರೆ ತೆಂಗಿನಕಾಯಿಯಿಂದ ಹಿಡಿದು ಎಲ್ಲಾ ವಸ್ತುಗಳನ್ನೂ ಕೊಳ್ಳುವುದು ಅನಿವಾರ್ಯವಾಗಿತ್ತು. ಹೀಗಾಗಿ ಅಡುಗೆಗೆ ಬೇಕಾದ ಯಾವ ವಸ್ತುಗಳಿದ್ದರೂ ನಮ್ಮ ಒಂದು ಕಣ್ಣು ಅದರ ಮೇಲಿರುತ್ತಿತ್ತು.

ಇದೇ ಸಮಯದಲ್ಲಿ ಗೆಳೆಯನಾದ ಹಿಂದಿನ ವರ್ಷ ಪ್ರಯಾಗದಲ್ಲಿ ತರಗತಿಗಳನ್ನು ಪೂರೈಸಿದ್ದ ಗೆಳೆಯ ನಾಗಪತಿಗೆ ಕಾನ್ಪುರಕ್ಕೆ ಬರುವ ಪ್ರಸಂಗ ಬಂದೊದಗಿತು. ಶಿರಸಿಯ ವಧುವೊಬ್ಬಳಿಗೆ ಕಾನ್ಪುರದ ವರನೊಂದಿಗೆ ಮದುವೆ ನಿಶ್ಚಯವಾಗಿತ್ತು. ವಧುವಿನ ಕಡೆಯವರ ಪುರೋಹಿತನಾಗಿದ್ದ ನಾಗಪತಿ ಕಾನ್ಪುರದಿಂದ ೨೦೦ ಕಿಮೀ ದೂರವಿರುವ ಪ್ರಯಾಗಕ್ಕೆ ಬರುತ್ತೇನೆ ಎಂದು ತಿಳಿಸಿದ್ದ. ನಮ್ಮೊಂದಿಗಿದ್ದ ಪುರೋಹಿತನಾಗಿದ್ದ ಗಣೇಶನ ಬುದ್ಧಿ ಚುರುಕಾಯಿತು. "ಪೌರೋಹಿತ್ಯದಲ್ಲಿ ಸಿಕ್ಕಿದ ಅಕ್ಕಿ, ತೆಂಗಿನಕಾಯಿಗಳನ್ನು ತೆಗೆದುಕೊಂಡು ಬಾ" ಎಂದು ನಾಗಪತಿಗೆ ಸೂಚಿಸಿದ. ಸುಮಾರು ೬-೭ ತೆಂಗಿನಕಾಯಿಗಳು ಹಾಗೂ ೭-೮ ಕೆಜಿ ಅಕ್ಕಿಯನ್ನೂ ಊರಿನಿಂದ ಬೆಲ್ಲವನ್ನೂ, ಇತರ ಅನೇಕ ಸಾಮಾನುಗಳನ್ನೂ ಹೊತ್ತುಕೊಂಡು ನವಂಬರ್ ೧೪ರ ಮಂಗಳವಾರ ಮಧ್ಯಾಹ್ನ ಕಾಲೇಜಿಗೆ ಬಂದಿಳಿದ. ಆತನಿಗೆ ಹಿಂದಿನ ವರ್ಷ ಪ್ರಯಾಗದಲ್ಲಿದ್ದ ಅನುಭವವಿದ್ದುದರಿಂದ ಆತನೊಂದಿಗೆ ಚೌಕ್ ಮಾರ್ಕೆಟ್ ಗೆ ತೆರಳಿ ಕಂಬಳಿಗಳನ್ನು ಕೊಳ್ಳುವುದೆಂದು ತೀರ್ಮಾನಿಸಿದೆವು. ಮರುದಿನ ಚೌಕ್ ಮಾರ್ಕೆಟ್ ನಿಂದ ಕಂಬಳಿಗಳನ್ನು ಖರೀದಿಸಿಯೂ ಆಯಿತು. ನಾವು ಮೊದಲೇ ಹಾಸಿಗೆಯನ್ನು ಖರೀದಿಸಿದ್ದರಿಂದ ಚಳಿಗಾಲದಲ್ಲಿ ಮಲಗುವ ಸಮಸ್ಯೆ ದೂರವಾಯಿತು. ಪ್ರಯಾಗದಲ್ಲಿದ್ದ ಆತನ ಅನುಭವ ಹಾಗೂ ನಮ್ಮ ಆಲೋಚನೆಗಳು ಸೇರಿ 'ಹಳೆ ಬೇರು ಹೊಸ ಚಿಗುರು ಕೂಡಿರಲು ಮರ ಸೊಬಗು' ಎಂಬಂತೆ ಪ್ರಯಾಗದ ನಮ್ಮ ೬ ತಿಂಗಳ ವಾಸಕ್ಕೆ ದೃಷ್ಟಿಕೋನವೊಂದು ದೊರಕಿತು. ನಾಗಪತಿ ೨ ದಿನ ನಮ್ಮೊಂದಿಗಿದ್ದು ಊರಿಗೆ ಹಿಂದಿರುಗಿದ.

ಶನಿವಾರ ರವಿವಾರಗಳಂದು ಕಾಶಿಗೆ ಹೋಗಲೇಬೇಕು ಎಂಬ ದೃಢ ನಿರ್ಧಾರ ನಮ್ಮದಾಗಿತ್ತು. ಕಾಶಿಯ ಚಿಂತಾಮಣಿ ಭಟ್ಟರಿಂದ ಸಕಾರಾತ್ಮಕ ಪ್ರತಿಕ್ರಿಯೆಯೂ ದೊರಕಿತು. ಆದ್ದರಿಂದ ಬೆಳಗ್ಗೆ ಬೇಗನೇ ಎದ್ದು ೬ ಗಂಟೆಯ ರೈಲಿಗೆ ನವಂಬರ್ ೧೮ರ ಶನಿವಾರ ಕಾಶಿಗೆ ಹೊರಟೆವು. ಅಂತೂ ಇಂತೂ ೧೨೦ ಕಿಮೀ ದೂರವನ್ನು ೫ ಗಂಟೆಗಳಲ್ಲಿ ಪ್ಯಾಸೆಂಜರ್ ರೈಲು ತಲುಪಿತು. ಚಿಂತಾಮಣಿ ಭಟ್ಟರ ಸಲಹೆಯಂತೆ ಕಾಶಿಯ ಕಚ್ಚಾ ಗಲ್ಲಿಯ ಸ್ವಾಮಿ ನಾರಾಯಣ ಮಂದಿರವನ್ನು ತಲುಪಿದೆವು. ತಲುಪಿದ ತಕ್ಷಣವೇ ಉಳಿದುಕೊಳ್ಳಲು ಕೊಠಡಿಯೊಂದನ್ನು ವ್ಯವಸ್ಥಾಪಿಸಿದ ಚಿಂತಾಮಣಿ ಭಟ್ಟರು, ಗಂಟೆ ೧೨ ಆದರೂ ನಮ್ಮ ತಿಂಡಿ ಆಗದೇ ಇದ್ದುದರಿಂದ ಅವಲಕ್ಕಿ ಚಹಗಳನ್ನು ಕೊಟ್ಟರು. ಅವರ ಸೂಚನೆಯಂತೆ ಪುಣ್ಯಕ್ಷೇತ್ರ ಕಾಶಿಯಲ್ಲಿ ಹರಿಯುವ ಪವಿತ್ರ ಗಂಗಾ ನದಿಯ ಗಾಯ್ ಘಾಟ್ ನಲ್ಲಿ ಸ್ನಾನ ಪೂರೈಸಿ ಗೂಗಲ್ ಮ್ಯಾಪ್ ಸಹಾಯದಿಂದ

ವಿಶ್ವನಾಥ ಮಂದಿರದತ್ತ ಹೊರಟೆವು. ಕಾಶಿಯಲ್ಲಿನ ಗಲ್ಲಿಗಳನ್ನು ಕಂಡು ವಿಚಿತ್ರವಾದ ಹೊಸ ಲೋಕವನ್ನೇ ಕಂಡಂತಾಯಿತು. ಎಲ್ಲಿ ತಿರುಗಬೇಕು, ಎಲ್ಲಿಂದ ನಡೆಯಬೇಕು, ಯಾವ ಗಲ್ಲಿಯ ಯಾವ ತಿರುವು ಎಲ್ಲಿಗೆ ಕೊಂಡೊಯ್ಯುತ್ತದೆ ಎಂಬುವುದನ್ನು ತಿಳಿಯುವುದು ಕಾಶಿಯಲ್ಲಿ ಹಲವು ವರ್ಷಗಳ ಕಾಲ ವಾಸಿಸಿದರೂ ಕಷ್ಟ ಎಂದೆನಿಸಿತು. ಸುಮಾರು ೩ ಅಡಿ ಅಗಲದ ಗಲ್ಲಿಯ ಇಕ್ಕೆಲಗಳಲ್ಲೂ ಅಂಗಡಿಗಳು ಕಾಣಸಿಗುತ್ತವೆ. ಕಾಶಿಯ ಸಿಹಿತಿಂಡಿಗಳಂತೂ ಜಗತ್ಪ್ರಸಿದ್ಧ. ಸಿಹಿತಿಂಡಿಗಳ ಅಂಗಡಿಗಳ ಮಧ್ಯದಲ್ಲೇ ೩ ಅಡಿ ಜಾಗದಲ್ಲಿ ವಾಯುವೇಗದಿಂದ ಚಲಿಸುವ ಬೈಕ್ ಗಳ ನಡುವೆ ನಡೆಯುವುದೇ ಒಂದು ಸಾಹಸ. ಇಂತಹ ಗಲ್ಲಿಗಳಲ್ಲಿ ಸುಮಾರು ೨ ಕಿಮೀ ದೂರವನ್ನು ಕ್ರಮಿಸಿ ಮುಖ್ಯಮಾರ್ಗವನ್ನು ಸೇರಿದೆವು. ಕಾಶಿಯ ಅನ್ನಪೂರ್ಣಾ ಛತ್ರದಲ್ಲಿ ಒಳ್ಳೆಯ ಊಟ ಪ್ರಸಾದದ ರೂಪದಲ್ಲಿ ದೊರೆಯುತ್ತದೆ. ಎಂದು ಹಿಂದಿನ ವರ್ಷ ಪ್ರಯಾಗದಲ್ಲಿದ್ದ ಮಿತ್ರರು ತಿಳಿಸಿದ್ದರು. ಚಿಂತಾಮಣಿ ಭಟ್ಟರ ಮನೆಯಲ್ಲಿ ಅವಲಕ್ಕಿ ತಿಂದಿದ್ದರೂ ಗಂಗಾಸ್ನಾನ ಹಾಗೂ ಗಲ್ಲಿಯಲ್ಲಿ ನಡೆದಿದ್ದರಿಂದ ತುಸು ಹಸಿವಾಗಿತ್ತು. ಆದ್ದರಿಂದ ಅನ್ನಪೂರ್ಣಾ ಛತ್ರವನ್ನು ಹೊಕ್ಕು ಅನ್ನ, ದಾಲ್, ಸ್ವೀಟ್, ಮಜ್ಜಿಗೆಗಳನ್ನು ಉಂಡೆವು. ಕಾಶಿ ಪುಣ್ಯಕ್ಷೇತ್ರ ಮಾತ್ರವಲ್ಲದೇ ಬಹಳ ಹಿಂದಿನ ಕಾಲದಿಂದಲೂ ಸಂಸ್ಕೃತಾಧ್ಯಯನದ ಮುಖ್ಯ ಕೇಂದ್ರ. ಆದ್ದರಿಂದ ಸಂಸ್ಕೃತದ ವಿದ್ಯಾರ್ಥಿಗಳಾದ ನಮಗೆ ಕಾಶಿಯಲ್ಲಿದ್ದೇವೆ ಎಂಬ ಭಾವವೇ ಆನಂದವನ್ನುಂಟುಮಾಡಿತ್ತು. ಸಂಸ್ಕೃತ ಪುಸ್ತಕಗಳನ್ನು ಪ್ರಕಾಶಿಸುವ ಅತಿದೊಡ್ಡ ಸಂಸ್ಥೆಯಾದ ಚೌಖಾಂಬಾ ಸುರಭಾರತೀ ಪ್ರಕಾಶನದ ಮುಖ್ಯ ಕಛೇರಿ ಹಾಗೂ ೪ ಶಾಖೆಗಳು ಕಾಶಿಯಲ್ಲಿವೆ. ಆದ್ದರಿಂದ ಪುಸ್ತಕಗಳ ಮಳಿಗೆಗೆ ಹೋಗಿ ಪುಸ್ತಕಗಳನ್ನು ಖರೀದಿಸುವುದೂ ನಮ್ಮ ಕಾಶಿ ಯಾತ್ರೆಯ ಉದ್ದೇಶವಾಗಿತ್ತು.

ಭಾನುವಾರ ಮುಂಜಾನೆ ೫ ಗಂಟೆಗೆ ಕಾಶಿ ವಿಶ್ವನಾಥನ ದರ್ಶನಕ್ಕೆ ಹೋದರೆ ಜನಸಂದಣಿ ಕಡಿಮೆಯಿರುತ್ತದೆ ಎಂದು ಚಿಂತಾಮಣಿಭಟ್ಟರು ಸೂಚಿಸಿದ್ದರು. ಆದ್ದರಿಂದ ಮೊದಲಿಗೆ ಪುಸ್ತಕದ ಮಳಿಗೆಗಳಿಗೇ ತೆರಳೋಣವೆಂದುಕೊಂಡು ಚೌಖಾಂಬಾ ಪ್ರಕಾಶನದ ಶಾಖೆಯೊಂದನ್ನು ಹೊಕ್ಕೆವು. ಅಲ್ಲಿನ ಸಿಬ್ಬಂದಿ ನಮ್ಮೊಂದಿಗೆ ಸರಿಯಾಗಿ ಸ್ಪಂದಿಸಲಿಲ್ಲ. ಅಲ್ಲದೇ ಆ ಶಾಖೆಯಲ್ಲಿ ಹೆಚ್ಚಿನ ಪುಸ್ತಕಗಳಿರಲಿಲ್ಲ. ಮತ್ತೊಂದು ಶಾಖೆಯನ್ನು ಹೊಕ್ಕಾಗ ನಾನು ಕೊಳ್ಳಬೇಕೆಂದುಕೊಂಡಿದ್ದ ಅನೇಕ ಪುಸ್ತಕಗಳು ಉಪಲಬ್ಧವಾದವು. ಸಾಮಾನ್ಯವಾಗಿ ಗ್ರಂಥಾಲಯದಲ್ಲಿ ಪುಸ್ತಕಗಳನ್ನು ಓದಿದಾಗ ಸಂಗ್ರಹಯೋಗ್ಯವೆನಿಸಿದ್ದನ್ನು ಕೊಳ್ಳಬೇಕೆಂದು ಸಂಕಲ್ಪಿಸುತ್ತೇನೆ. ಹೀಗೆ ಮೊದಲೇ ಕೊಳ್ಳಬೇಕೆಂದು ಸಂಕಲ್ಪಿಸಿದ್ದ ಅನೇಕ ಪುಸ್ತಕಗಳನ್ನು ಕೊಂಡುಕೊಂಡೆ. ಪುಸ್ತಕಗಳ

ಭಾರ ಹೆಚ್ಚಾಗಿದ್ದರಿಂದ ಪೋಸ್ಟ್ ಮೂಲಕ ಶೃಂಗೇರಿಗೆ ಕಳುಹಿಸುವ ವ್ಯವಸ್ಥೆಯನ್ನು ಮಳಿಗೆಯವರೇ ವಹಿಸಿಕೊಂಡರು. ಮಿತ್ರರಿಗೆ ಬೇಕಾದ ಒಂದೆರಡು ಪುಸ್ತಕಗಳು ದೊರೆಯದ ಕಾರಣ ಪ್ರಕಾಶನದ ಮುಖ್ಯ ಕಛೇರಿಗೆ ತೆರಳಿದೆವು. ಕಛೇರಿಗೆ ತೆರಳುವ ದಾರಿಯಲ್ಲೇ ಕಾಲಭೈರವ ಮಂದಿರವಿದ್ದುದು ನಮ್ಮ ಭಾಗ್ಯವೆಂದೇ ಹೇಳಬೇಕು. ಏಕೆಂದರೆ ಕಾಲಭೈರವ ಮಂದಿರ ಕಾಶಿನೂಲು ದೊರೆಯುವ ಪ್ರಮುಖ ಸ್ಥಳ. ಆ ಮಂದಿರದಲ್ಲಿ ಭಾನುವಾರದಂದು ಕಾಲಿಡಲು ಕಷ್ಟವಾಗುವಷ್ಟು ನೂಕುನುಗ್ಗಲು ಇರುತ್ತದೆ. ಆದ್ದರಿಂದ ಶನಿವಾರವೇ ಕಾಲಭೈರವ ಮಂದಿರಕ್ಕೆ ತೆರಳಿ ಎಂದು ಕಳೆದ ವರ್ಷ ಪ್ರಯಾಗದಲ್ಲಿದ್ದ ಗೆಳೆಯ ಸುನೀಲ ತಿಳಿಸಿದ್ದ. ಆದರೆ ಪುಸ್ತಕಗಳನ್ನು ಕೊಳ್ಳುವ ಭರದಲ್ಲಿ ನಮಗೆಲ್ಲರಿಗೂ ಮರೆತೇ ಹೋಗಿತ್ತು. ದಾರಿಯಲ್ಲಿ 'ಕಾಲಭೈರವ್ ಮಂದಿರ್ ಕೀ ರಾಸ್ತಾ' ಎಂಬ ಫಲಕ ಕಂಡಾಗ ಸುನೀಲನ ಮಾತು ಥಕ್ಕನೆ ನೆನಪಾಯಿತು. ಮಂದಿರದಲ್ಲಿ ದರ್ಶನ ಮಾಡಿ ಕಾಶಿನೂಲುಗಳನ್ನು ಕೊಂಡುಕೊಂಡು ಚೌಖಾಂಬಾ ಪ್ರಕಾಶನದ ಮುಖ್ಯ ಕಛೇರಿಗೆ ಬಂದಾಗ ಸಂಜೆಯಾಗಿತ್ತು. ಕಛೇರಿ ಸಮಯ ೫ ಗಂಟೆ ಕಳೆದಿದ್ದರೂ ನಮ್ಮನ್ನು ಸ್ವಾಗತಿಸಿದ ಪ್ರಕಾಶನದ ಮಾಲಿಕರು ಹಿಂದಿನ ಅಂಗಡಿಯಲ್ಲಿ ಕೊಂಡ ಪುಸ್ತಕಗಳ ಬಿಲ್ ನೋಡಿ ಪುಳಕಿತರಾದರು. ನಾವು ಖಂಡಿತ ಪುಸ್ತಕಗಳನ್ನು ಕೊಳ್ಳುತ್ತೇವೆ ಎಂಬ ಭರವಸೆ ಅವರಲ್ಲಿ ಮೂಡಿತ್ತು. ಆದ್ದರಿಂದ "ನೀವು ಹೇಳಿದ ಪುಸ್ತಕವನ್ನು ಹುಡುಕಿಡುತ್ತೇವೆ ನೀವು ಗಂಗಾರತಿಯನ್ನು ನೋಡಿಕೊಂಡು ಬನ್ನಿ" ಎಂದು ನಮ್ಮನ್ನು ಕಳುಹಿಸಿದರು. ಅಲ್ಲಿಂದ ಜನಸಂದಣಿ, ದನಸಂದಣಿ, ಎಮ್ಮೆಸಂದಣಿ, ವಾಹನಸಂದಣಿಗಳನ್ನೆಲ್ಲಾ ದಾಟಿ, ಸುಮಾರು ೨ ಕಿಮೀಗಳಷ್ಟು ದೂರವನ್ನು ಗಲ್ಲಿಗಳಲ್ಲಿ ನಡೆದು ಗಂಗಾರತಿ ನಡೆಯುವ ಮುಖ್ಯ ಸ್ಥಾನವಾದ ದಶಾಶ್ವಮೇಧಘಾಟ್ ತಲುಪಿದೆವು. ಸುಮಾರು ೩೦ ನಿಮಿಷಗಳ ಕಾಲ ಸುಮಾರು ೫೦ ಬತ್ತಿಗಳಿರುವ ೭ ಗಂಗಾರತಿಗಳನ್ನು ೭ ಅರ್ಚಕರು ಎತ್ತುತ್ತಲಿದ್ದರು. ಪೂರ್ವಾಂಗ ಉತ್ತರಾಂಗಗಳೆಲ್ಲಾ ಸೇರಿ ಸುಮಾರು ೧ ಗಂಟೆಯ ಕಾಲ ನಡೆಯುವ ಗಂಗಾರತಿಯನ್ನು ಗಂಗಾನದಿಯಲ್ಲಿ ದೋಣಿಗಳ ಮೇಲೆ ಕುಳಿತು ನೋಡಿದೆವು. ದೇವರಿಗೆ ಮಾಡುವ ಆರತಿಯನ್ನು ದೇವರ ಮೇಲೆಯೇ ಕುಳಿತು ನೋಡುವುದು ಸೋಜಿಗವೆನಿಸಿತು. ನಮ್ಮ ಪಕ್ಕದಲ್ಲಿದ್ದ ಸ್ಥಳೀಯ ಭಕ್ತರೊಬ್ಬರು ೨೦೦೩ ರಲ್ಲಿ ಗಂಗಾರತಿಯ ಸಂದರ್ಭದಲ್ಲಿ ಭಯೋತ್ಪಾದಕರು ಸ್ಫೋಟ ನಡೆಸಿದ್ದ ಸ್ಥಳವನ್ನು ತೋರಿಸಿದರು. ಅರ್ಚಕರು ಏಕರೀತಿಯಲ್ಲಿ ಎತ್ತುತ್ತಿದ್ದ ಆರತಿಯನ್ನು ಭಕ್ತಿಯಿಂದ ಕಣ್ತುಂಬಿಕೊಂಡೆವು. ಆರತಿಯ ನಂತರ ಭಕ್ತರು ಸಾಲು ಸಾಲು ದೀಪಗಳನ್ನು ಗಂಗೆಯಲ್ಲಿ ಬಿಡುತ್ತಿದ್ದರು.

ಈ ಭವ್ಯ ಮನೋಹರ ದೃಶ್ಯಗಳನ್ನು ಕಣ್ತುಂಬಿಕೊಂಡು ಪುನಃ ಸಂದಣಿಯ ಮಧ್ಯದಲ್ಲಿ ಚೌಖಾಂಬಾ ಪ್ರಕಾಶನದ ಕಛೇರಿಯತ್ತ ಹೆಜ್ಜೆ ಹಾಕಿದೆವು. ಪ್ರಕಾಶನದ ಮಾಲಿಕರು ನೀವು ಕೇಳಿದ ೨-೩ ಪುಸ್ತಕಗಳು ಬಹಳ ದುರ್ಲಭವಾಗಿದ್ದು ಪುಸ್ತಕಗಳ ಜೆರಾಕ್ಸ್ ಕಾಪಿ ಮಾಡಿಸಿ ಕಳುಹಿಸುತ್ತೇವೆ. ಎಂದು ವಿಳಾಸ ತೆಗೆದುಕೊಂಡರು. ಅಲ್ಲದೇ ಪುಸ್ತಕಗಳ ಅವಶ್ಯಕತೆಯಿದ್ದಾಗ ವಿವರವನ್ನು ವಾಟ್ಸಾಪ್ ಮಾಡಿದರೆ ಪುಸ್ತಕಗಳನ್ನು ಕಳುಹಿಸಿಕೊಡುತ್ತೇವೆ ಎಂದು ಮೊಬೈಲ್ ನಂಬರ್ ನೀಡಿದರು. ಚೌಖಾಂಬಾ ಪ್ರಕಾಶನದ ಮಾಲಕರಿಗೆ ಸಂಸ್ಕೃತ ಗ್ರಂಥಗಳ ಬಗೆಗೆ, ಲೇಖಕರ ಬಗೆಗೆ, ವ್ಯಾಖ್ಯಾಕಾರರ ಬಗೆಗೆ ತಿಳಿದಿರುವಷ್ಟು ಮಾಹಿತಿ ಯಾವ ವಿದ್ವಾಂಸರಿಗೂ ತಿಳಿದಿರಲಿಕ್ಕಿಲ್ಲ ಎಂದೆನಿಸಿತು. ಅಲ್ಲದೇ ಗ್ರಾಹಕರ ಅವಶ್ಯಕತೆಗಳಿಗೆ ಪ್ರಕಾಶನ ಸ್ಪಂದಿಸುವ ಪರಿಯನ್ನು ಕಂಡು ಚೌಖಾಂಬಾ ಪ್ರಕಾಶನ ಏಕೆ ಸಂಸ್ಕೃತ ಪ್ರಕಾಶನಗಳಲ್ಲಿ ಅಗ್ರಸ್ಥಾನದಲ್ಲಿದೆ ಎಂಬುವುದು ಸ್ಪಷ್ಟವಾಯಿತು. ಅಲ್ಲಿಂದ ಚಿಂತಾಮಣಿ ಭಟ್ಟರ ಮಂದಿರಕ್ಕೆ ತೆರಳಿ ಅನ್ನ, ಸಾರು, ಪಲ್ಯ ಮೊಸರುಗಳನ್ನುಂಡೆವು. ಅವರು ಬಡಿಸಿದ್ದ ಎಮ್ಮೆಹಾಲಿನ ಗಟ್ಟಿ ಮೊಸರು 'ಮಾಹಿಷಂ ಚ ಶರಚ್ಚಂದ್ರಚಂದ್ರಿಕಾಧವಲಂ ದಧಿ' ಎಂಬ ವಾಕ್ಯವನ್ನು ಅನುಭವಕ್ಕೆ ತಂದಿತು.

ಹಿಂದಿನ ದಿನ ಸುಮಾರು ೧೦ ಕಿಮೀಗಳಷ್ಟು ದೂರವನ್ನು ಕಾಶಿಯ ಗಲ್ಲಿಗಳಲ್ಲಿ ಸುತ್ತಾಡಿದ್ದರಿಂದ ಹಾಗೂ ಪುಷ್ಕಳ ಭೋಜನ ದೊರೆತದ್ದರಿಂದ ಐದು ಮಂದಿಯೂ ಗಾಢ ನಿದ್ರೆಗೆ ಜಾರಿದೆವು. "ಮುಂಜಾನೆ ಸ್ನಾನ ಮಾಡಿ ೫ ಗಂಟೆಗೆ ವಿಶ್ವನಾಥನ ದರ್ಶನಕ್ಕೆ ಅಣಿಯಾಗಿ" ಎಂದು ಚಿಂತಾಮಣಿ ಭಟ್ಟರು ಸೂಚಿಸಿದ್ದರು. ಹಾಗಾಗಿ ಗಣೇಶ ೩.೪೫ಕ್ಕೇ ಅಲಾರಾಂ ಇಟ್ಟಿದ್ದರೂ ಶಬ್ದವಾಗಿದ್ದು ತಿಳಿಯದೇ ಆಫ್ ಮಾಡಿ ಮಲಗಿದ್ದ. ನಾನಂತೂ ಮಧ್ಯಾಹ್ನದ ಹೊತ್ತಿನಲ್ಲೂ ಗೊರಕೆ ಹೊಡೆದು ನಿದ್ರಿಸುವ ಸಾಮರ್ಥ್ಯ ಹೊಂದಿದವನು. ಆದರೂ ನನ್ನ ಅಜ್ಜಿ ಬಹಳ ಹಿಂದೆ ನೀಡಿದ್ದ ಸೂಚನೆಯಂತೆ ಯಾವಾಗಲಾದರೂ ಬೇಗ ಏಳಬೇಕೆಂದರೆ ನಾಳೆ ಇಷ್ಟು ಹೊತ್ತಿಗೆ ಏಳಬೇಕು ಎಂಬ ದೃಢ ಸಂಕಲ್ಪವನ್ನು ಮಾಡಿ ಮಲಗುತ್ತೇನೆ. ಹಲವು ಬಾರಿ ಇಂತಹ ಸಂದರ್ಭಗಳಲ್ಲಿ ಸಂಕಲ್ಪಿಸಿದ ಸಮಯಕ್ಕೆ ಎಚ್ಚರವಾಗಿದೆ ಕೂಡಾ. ಕಾಶಿಯಲ್ಲಿ೪.೩೦ ಕ್ಕೆ ಎದ್ದೇಳಬೇಕು ಎಂದು ಸಂಕಲ್ಪಿಸಿದ್ದ ನನಗೆ ೪.೩೦ ಕ್ಕೆ ಸರಿಯಾಗಿ ಎಚ್ಚರವಾಯಿತು. ಮಿತ್ರರಲ್ಲಿ ಇಬ್ಬರಾದರೂ ಸ್ನಾನ ಮುಗಿಸಿರಬಹುದು ಎಂದು ಭಾವಿಸಿದ್ದ ನನಗೆ ಮಿತ್ರರೆಲ್ಲರೂ ಮಲಗಿದ್ದನ್ನು ಕಂಡು ಆಘಾತವಾಯಿತು. ಎಲ್ಲರನ್ನೂ ಬಡಿದೆಬ್ಬಿಸಿದೆ. ಕೊಠಡಿಯಲ್ಲೇ ಬಚ್ಚಲು ಮನೆಯಿದ್ದರೂ ಎಲ್ಲರ ಸ್ನಾನವಾಗುವಾಗ ತಡವಾಗಬಹುದು ಎಂದುಕೊಂಡು ಮಂದಿರದ ಸಾರ್ವಜನಿಕ ಸ್ನಾನಗೃಹಕ್ಕೆ ತೆರಳಿದೆ. ಸ್ನಾನಗೃಹದತ್ತ

ನಡೆಯುತ್ತಿರುವಾಗಲೇ ಮಂದಿರದಿಂದ ಎರಡು ನಿಮಿಷಗಳಷ್ಟು ದೂರವಿರುವ ಗಂಗಾನದಿಯ ಗಾಯ್ ಘಾಟ್ ನಲ್ಲಿ ಸ್ನಾನ ಮಾಡುವ ಮನಸ್ಸಾಯಿತು. ಚಳಿಯೂ ಸ್ವಲ್ಪ ಮಟ್ಟಿಗೆ ಇದ್ದುದರಿಂದ ಹಿಂದಿನ ದಿನ "ಗಂಗಾಸ್ನಾನ ಮಾಡಿ ವಿಶ್ವನಾಥನ ದರ್ಶನ ಮಾಡೋಣ" ಎಂಬ ನನ್ನ ಪ್ರಸ್ತಾವಕ್ಕೆ ತೀವ್ರ ಪ್ರತಿರೋಧವನ್ನು ಗೆಳೆಯರು ವ್ಯಕ್ತಪಡಿಸಿದ್ದರು. ನಾನೊಬ್ಬನೇ ಗಂಗೆಯಲ್ಲಿ ಮಿಂದು ಹಿಂದಿರುಗಿದೆ. ನಾನು ಸ್ನಾನ ಮಾಡುತ್ತಿರುವಾಗಲೇ ಅಸ್ಥಿವಿಸರ್ಜನೆಯೂ ನಡೆಯುತ್ತಿತ್ತು. ಕಾಶಿಯಲ್ಲಿ ಗಂಗಾಸ್ನಾನದ ಸಮಯದಲ್ಲಿ ತೇಲುತ್ತಿರುವ ಹೆಣಗಳನ್ನು ಕಾಣಬಹುದು ಎಂಬ ಕತೆಗಳನ್ನು ಕೇಳಿದ್ದರಿಂದ ಅಸ್ಥಿವಿಸರ್ಜನೆಯಲ್ಲಿ ವಿಶೇಷವೋ, ಅಸಹ್ಯತೆಯೋ ಕಾಣಲಿಲ್ಲ. ಅಂತೂ ಇಂತೂ ಚಿಂತಾಮಣಿ ಭಟ್ಟರು ಹೇಳಿದ್ದಕ್ಕಿಂತ ಅರ್ಧ ಗಂಟೆ ತಡವಾಗಿ ಸುಮಾರು ೫.೩೦ ರ ವೇಳೆಗೆ ಅವರು ವ್ಯವಸ್ಥಾಪಿಸಿದ್ದ ಆಟೋವೊಂದರಲ್ಲಿ ವಿಶ್ವನಾಥನ ದರ್ಶನಕ್ಕೆ ಹೊರಟೆವು. ಭಟ್ಟರೇ ಕಳುಹಿಸಿದ್ದ ಮಾಣಿಯೊಬ್ಬ ನಮ್ಮೊಂದಿಗೆ ಕುಮಟಾದ ಕುಟುಂಬವೊಂದಕ್ಕೂ ಮಾರ್ಗದರ್ಶಕನಾಗಿದ್ದ. ಮಂದಿರದ ಪ್ರವೇಶ ಸಮಯದಲ್ಲಿ ಸಮೀಪದಲ್ಲಿನ ಭವ್ಯ ಮಸೀದಿಯನ್ನು ಕಂಡು ವ್ಯಥೆಪಡುತ್ತಾ, ವಿಶ್ವನಾಥಲಿಂಗದ ದರ್ಶನವನ್ನು ಪಡೆದೆವು. ತದನಂತರ ಅನ್ನಪೂರ್ಣಾ ಮಂದಿರ, ಪವಿತ್ರ ಬಾವಿ ಹಾಗೂ ಇನ್ನಿತರ ಅನೇಕ ದೇವಾಲಯಗಳ ದರ್ಶನ ಪಡೆದು ಸುಮಾರು ೭ ಗಂಟೆಗೆ ಕೊಠಡಿಗೆ ಹಿಂದಿರುಗಿದೆವು. ಮುಂಜಾನೆಯ ಸಮಯವಾದ್ದರಿಂದ ಮಂದಿರದಲ್ಲಿ ಜನಸಂದಣಿಯಿರಲಿಲ್ಲ. ಅಲ್ಲದೇ ಭಟ್ಟರು ಕಳುಹಿಸಿದ ಮಾಣಿ ಮಾರ್ಗದರ್ಶಕನಾಗಿ ಇದ್ದುದರಿಂದ ಎಲ್ಲೂ ಗೊಂದಲವುಂಟಾಗಲಿಲ್ಲ.

ಉಪಾಹಾರವನ್ನು ಮುಗಿಸಿ ೮.೩೦ ರ ಸುಮಾರಿಗೆ ಒಂದು ರಿಕ್ಷಾದಲ್ಲಿ ಕಾಶಿಯಲ್ಲಿನ ದೇವಾಲಯಗಳನ್ನು ನೋಡಲು ಹೊರಟೆವು. ಮೊದಲಿಗೆ 'ಕವಡಿ ಮಾತಾ ಮಂದಿರ'ದಲ್ಲಿ ದರ್ಶನವನ್ನು ಪಡೆದು ತದನಂತರ 'ತುಲಸೀ ಮಾನಸಧಾಮ'ಕ್ಕೆ ತೆರಳಿದೆವು. ಈ ಮಂದಿರದ ಗೋಡೆಗಳಲ್ಲಿ ಸಂಪೂರ್ಣ ತುಲಸೀ ರಾಮಾಯಣವನ್ನು ಕೆತ್ತಲಾಗಿದೆ. ಅಲ್ಲದೇ ರಾಮಾಯಣ, ಮಹಾಭಾರತ, ಪುರಾಣ, ಇತಿಹಾಸಗಳ ಪ್ರಮುಖ ಘಟನಾವಳಿಗಳ ಪ್ರತಿಕೃತಿಗಳನ್ನು ನಿರ್ಮಿಸಲಾಗಿದೆ. ಅಲ್ಲಿಂದ ಸಂಕಟಮೋಚನ ಆಂಜನೇಯ ಮಂದಿರಕ್ಕೆ ತೆರಳಿದಾಗ ಅಚ್ಚರಿಯೊಂದು ಕಾದಿತ್ತು. ನಮ್ಮ ಶೃಂಗೇರಿ ವಿದ್ಯಾಪೀಠದಲ್ಲಿ ಓದುತ್ತಿದ್ದ ಇಟಲಿ ಪ್ರಜೆಯಾದ ಸಿಮೋನಿಟಾ ಕಾಣಸಿಕ್ಕಿದಳು. ಸಂಕಟಮೋಚನ ಹನುಮಾನ್ ಮಂದಿರದಲ್ಲಿ ಕುಳಿತಿದ್ದ ಆಕೆಯನ್ನು ಕಂಡು ಅಚ್ಚರಿಯಾಯಿತು. ಇಟಲಿಯ ಪ್ರಜೆ ಎಂಬ ಕಾರಣಕ್ಕೆ ಭಾರತದ ಅನೇಕ ಸಂಸ್ಕೃತ

ವಿಶ್ವವಿದ್ಯಾಲಯಗಳಲ್ಲಿ ಆಕೆಗೆ ಪ್ರವೇಶವನ್ನು ನಿರಾಕರಿಸಲಾಗಿತ್ತು. ಒಂದು ವೇಳೆ ಅವಕಾಶವನ್ನು ನೀಡಿದರೂ ದುಬಾರಿ ಶುಲ್ಕವನ್ನು ತೆಗೆದುಕೊಳ್ಳುತ್ತಿದ್ದರು. ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ ಅಧ್ಯಯನದ ಸಾಧ್ಯತೆಗಳನ್ನು ತಿಳಿದುಕೊಳ್ಳಲು ವಾರಾಣಾಸಿಗೆ ಆಗಮಿಸಿದ್ದಳು. ಆಕೆಯೊಂದಿಗೆ ಮಾತನಾಡಿ ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಪರಿಸರದಲ್ಲಿರುವ ಬಿರ್ಲಾ ಮಂದಿರದ ದರ್ಶನಕ್ಕೆ ತೆರಳಿದೆವು. ದೇವಾಲಯ ಬೃಹತ್ತಾಗಿ ಮನೋಹರವಾಗಿತ್ತು. ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಪರಿಸರವನ್ನು ನೋಡಿ ಮತ್ತಷ್ಟು ಪುಳಕಗೊಂಡೆವು. ಆದರೆ ಸಂಪೂರ್ಣವಾಗಿ ವಿಶ್ವವಿದ್ಯಾಲಯವನ್ನು ನೋಡಲು ಸಮಯಾಭಾವವಿತ್ತು. ಈ ವಿಶ್ವವಿದ್ಯಾಲಯವನ್ನು ನೋಡಲೆಂದೇ ಇನ್ನೊಂದು ಬಾರಿ ಕಾಶಿಗೆ ಬರಬೇಕೆಂದು ನಿರ್ಧರಿಸಿದೆವು.

ಸಾರಾನಾಥವನ್ನೂ ತೋರಿಸಬೇಕು ಎಂಬ ಆಶಯ ರಿಕ್ಷಾ ಚಾಲಕನಿಗಿದ್ದರೂ ದಾರಿಯಲ್ಲಿಯೇ ಮಸೀದಿಯೊಂದರ ಬಳಿ ನಡೆಯುತ್ತಿದ್ದ ಮೆರವಣಿಗೆಯಿಂದಾಗಿ ವ್ಯರ್ಥವಾಗಿ ಮಾರ್ಗದ ಮಧ್ಯದಲ್ಲಿ ಕಾಯಬೇಕಾಯಿತು. ಅಲ್ಲದೇ 'ಮಣಿಕರ್ಣಿಕಾ ಘಾಟ್'ನ ದರ್ಶನವನ್ನೂ ಮಾಡಬೇಕು ಎಂದು ನಾವು ಹೇಳಿದ್ದರಿಂದ ಸಾರಾನಾಥಕ್ಕೆ ಹೋಗದೇ ಸ್ವಾಮಿ ನಾರಾಯಣ ಮಂದಿರಕ್ಕೆ ಹಿಂದಿರುಗಿದೆವು. ಆಗಲೇ ಗಂಟೆ ೧೨ ಆಗಿದ್ದರಿಂದ ತಡ ಮಾಡದೆಯೇ ಮಣಿಕರ್ಣಿಕಾ ಘಾಟ್ ನ ಕಡೆ ಹೊರಟೆವು. ಸ್ವಾಮಿ ನಾರಾಯಣ ಮಂದಿರದ ಸಮೀಪವಿರುವ ಗಾಯ್ ಘಾಟ್ ನಿಂದ ೭-೮ ಘಾಟ್ ಗಳನ್ನು ದಾಟಿ ಮಣಿಕರ್ಣಿಕಾ ಘಾಟ್ ತಲುಪಿದೆವು. ನಡೆದುಕೊಂಡು ಹೋಗುವಾಗ ದಾರಿಯಲ್ಲಿ ಬಾಗಿದ ಮಂದಿರವೊಂದಿದೆ. ಮಂದಿರವು ವಿಶ್ವನಾಥನಿಗೆ ನಮಿಸುತ್ತಿರುವಂತೆ ಭಾಸವಾಗುತ್ತದೆ. ಎಂದು ಚಿಂತಾಮಣಿ ಭಟ್ಟರು ಸೂಚಿಸಿದ್ದರು. ಆ ಮಂದಿರವನ್ನು ಕಂಡು ಮಣಿಕರ್ಣಿಕಾ ಘಾಟ್ ನತ್ತ ನಡೆದಾಗ ಘಾಟ್ ನಲ್ಲಿ ಚಿತೆಗಳು ಉರಿಯುತ್ತಿದ್ದವು. ಮಣಿಕರ್ಣಿಕಾ ಘಾಟ್ ನಲ್ಲಿ ವರ್ಷದ ೩೬೫ ದಿನವೂ ದಿನದ ೨೪ ಗಂಟೆಯೂ ೩-೪ ಚಿತೆಗಳು ಉರಿಯುತ್ತಿರುತ್ತವೆ. ಪ್ರತಿದಿನವೂ ಕನಿಷ್ಠ ಪಕ್ಷ ನೂರು ಶವಗಳ ದಹನವನ್ನು ನಡೆಸಲಾಗುತ್ತದೆ. ಇಲ್ಲಿ ಒಂದರ ಹಿಂದೊಂದರಂತೆ ಹೆಣಗಳನ್ನು ತರುತ್ತಿರುತ್ತಾರೆ. ಸಮೀಪದಲ್ಲಿರುವ ಮುಕ್ತಿಧಾಮದಲ್ಲಿ ಜನರು ಸಾವನ್ನು ನಿರೀಕ್ಷಿಸುತ್ತಿರುತ್ತಾರೆ. ಇಂತಹ ವೈಶಿಷ್ಟ್ಯವನ್ನು ಕಾಣಲು ವಿದೇಶಿಯರ ದಂಡೇ ನೆರೆದಿರುತ್ತದೆ. ವಿದೇಶಿಯರಿಗೆ ಘಾಟ್ ನಲ್ಲಿರುವ ಸಾಮಾನ್ಯ ಸಿಬ್ಬಂದಿ ಕೂಡಾ ನಿರರ್ಗಳವಾಗಿ ಇಂಗ್ಲೀಷಿನಲ್ಲಿ ಘಾಟ್ ನ ವೈಶಿಷ್ಟ್ಯವನ್ನು ಕಂಡು ವಿವರಿಸುತ್ತಿರುವುದನ್ನು ಕಂಡು ಅಚ್ಚರಿಯಾಯಿತು. "ಹರಿಶ್ಚಂದ್ರನ ಕಾಲದ ವೀರಬಾಹುಕ ವಂಶಜರು ಇಲ್ಲಿ ದಹನದ ಅಗ್ನಿಯನ್ನು

ನೀಡುತ್ತಾರೆ. ಆ ಕುಂಡದಲ್ಲಿ ಹರಿಶ್ಚಂದ್ರನ ಕಾಲದಿಂದಲೂ ನಿರಂತರವಾಗಿ ಅಗ್ನಿ ಉರಿಯುತ್ತಿರುತ್ತದೆ". ಎಂದು ಚಿಂತಾಮಣಿ ಭಟ್ಟರು ತಿಳಿಸಿದ್ದರು. ಅವರ ಮಾತನ್ನು ನೆನಪಿಸಿಕೊಂಡು ಅಗ್ನಿಯ ದರ್ಶನವನ್ನೂ ಮಾಡಿದೆವು. ಘಾಟ್ ನಲ್ಲಿ ದಹನದ ನಂತರ ಅಸ್ಥಿಯನ್ನು ಗಂಗೆಯಲ್ಲಿ ವಿಸರ್ಜಿಸಿಸುತ್ತಿದ್ದರು. ಅಸ್ಥಿವಿಸರ್ಜನೆಯ ನಂತರ ಬಂಗಾರವನ್ನು ಹುಡುಕಲು ಅನೇಕರು ಮರಳನ್ನು ಮೊಗೆಯುತ್ತಿದ್ದರು. ಹೆಣಗಳನ್ನು ಸುಡುವ ಹೊಗೆಯಲ್ಲಿ ಹೆಚ್ಚು ಹೊತ್ತು ನಿಲ್ಲುವುದು ಬೇಡ ಎಂದುಕೊಂಡು ಕೊಠಡಿಗೆ ವಾಪಾಸ್ಸಾದೆವು. ಊಟವಾದ ನಂತರ ನಮ್ಮ ವ್ಯವಸ್ಥೆಯ ಖರ್ಚು ಎಷ್ಟಾಯಿತು ಎಂದು ಚಿಂತಾಮಣಿ ಭಟ್ಟರನ್ನು ಕೇಳಿದರೆ ಏನೂ ಬೇಡ ಹೋಗಿ ಬನ್ನಿ ಎಂದರು. ಕಾಶಿ ಕ್ಷೇತ್ರಕ್ಕೆ ಯಾತ್ರಾರ್ಥಿಗಳಿಗೆ ವಾಸಾದಿಗಳನ್ನು ಕಲ್ಪಿಸುವುದೇ ಮುಖ್ಯವೃತ್ತಿಯಾಗಿರುವ ಚಿಂತಾಮಣಿ ಭಟ್ಟರು ನಾವು ವಿದ್ಯಾರ್ಥಿಗಳೆಂಬ ನೆಲೆಯಲ್ಲಿ ಉಚಿತವಾಗಿ ಆವಾಸ ಭೋಜನಗಳ ವ್ಯವಸ್ಥೆ ಮಾಡಿದ್ದರು. ಆದರೂ ನಮ್ಮ ತೃಪ್ತಿಗಾಗಿ ಯತ್ಕಿಂಚಿತ್ ಹಣವನ್ನು ಬೇಡವೆಂದರೂ ಅವರ ಕೈಯಲ್ಲಿಟ್ಟೆವು. ರೈಲು ಪ್ರಯಾಣದಿಂದ ವಿಳಂಬವಾಗಬಹುದು ಎಂಬ ಕಾರಣಕ್ಕಾಗಿ ಬಸ್ಸಿನ ದರ ೫ ಪಟ್ಟು ಹೆಚ್ಚಿದ್ದರೂ ಬಸ್ಸನ್ನೇರಿ ಸಂಜೆ ೮ ಗಂಟೆಯ ವೇಳೆಗೆ ಪ್ರಯಾಗಕ್ಕೆ ಹಿಂದಿರುಗಿದೆವು.

ಚಳಿಗಾಲ ಆರಂಭವಾದರೆ ದೂರದ ತಿರುಗಾಟ ಕಷ್ಟಸಾಧ್ಯ. ಆದ್ದರಿಂದ ಚಳಿಗಾಲಕ್ಕಿಂತ ಮೊದಲೇ ತಿರುಗಾಟವನ್ನು ಮುಗಿಸಿಕೊಂಡರೆ ಚಳಿಗಾಲ ಕಳೆದ ನಂತರ ಉಳಿದ ಕಡೆಗಳಲ್ಲಿ ತಿರುಗಾಡಬಹುದು ಎಂಬ ಎಣಿಕೆ ನಮ್ಮದಾಗಿತ್ತು. ಆದ್ದರಿಂದ ಕಾಶಿಯಿಂದ ವಾಪಾಸ್ಸಾಗಿ ೫ ದಿನಗಳ ತರಗತಿಗಳನ್ನು ಪೂರೈಸಿ, ನವಂಬರ್ ೨೬ ರಂದು ಚಿತ್ರಕೂಟಕ್ಕೆ ಹೊರಟೆವು. ಪ್ರಯಾಗದಿಂದ ೧೨೦ ಕಿಮೀ ದೂರವಿರುವ ಚಿತ್ರಕೂಟಕ್ಕೆ ಬಸ್ಸಿನಲ್ಲೇ ಹೋಗುವುದೆಂದು ತೀರ್ಮಾನವಾಯಿತು. ಮುರಳಿ ಕೃಷ್ಣನ ಪರಿಚಯದ ಕೋಣಾಲೇ ಸುಬ್ರಹ್ಮಣ್ಯ ಭಾರತೀಯವರ ಮುಖಾಂತರ ಚಿತ್ರಕೂಟದಲ್ಲಿ ಸಂಗಮಲಾಲ್ ಶುಕ್ಲ ಎಂಬುವವರ ಸಂಪರ್ಕ ಸಂಖ್ಯೆ ದೊರಕಿತು. ಸಂಗಮಲಾಲ್ ಶುಕ್ಲ 'ಕರ್ವೀ' ಎಂಬ ಸ್ಥಳದಲ್ಲಿ ಇಳಿದು ಶೇರ್ ಆಟೋದ ಮೂಲಕ ಅವರಿರುವ ಸ್ಥಳಕ್ಕೆ ಬರಲು ಸೂಚಿಸಿದರು. ಅವರ ಭೇಟಿಯಾದಾಗ ಮಧ್ಯಾಹ್ನ ೧ ಗಂಟೆಯಾಗಿತ್ತು. ಸಂಗಮಲಾಲ್ ಶುಕ್ಲ ಚಿತ್ರಕೂಟದ ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸಲು ನಮ್ಮನ್ನು ಕರೆದೊಯ್ದರು. ಅವರು ಅರವತ್ತೈದರ ಆಸುಪಾಸಿನ ವಯಸ್ಸಿನವರಾಗಿದ್ದರೂ ಶಕ್ತಿ, ಉತ್ಸಾಹಗಳು ನಮಗಿಂತ ಹೆಚ್ಚಾಗಿದ್ದವು. ಆರಂಭದಲ್ಲಿ ಬೇಕರಿಯೊಂದಕ್ಕೆ ಕರೆದೊಯ್ದು ಪೇಡೆಯನ್ನು ಕೊಡಿಸಿ ರಾಮ್ ಘಾಟ್ ನ ದರ್ಶನವನ್ನು ಮಾಡಿಸಿದರು. ರಾಮ್ ಘಾಟ್ ವನವಾಸ ಸಮಯದಲ್ಲಿ

ರಾಮ ಸ್ನಾನ ಮಾಡುತ್ತಿದ್ದ ಸ್ಥಳ. ಮಂದಾಕಿನೀ ನದಿಯ ತೀರದಲ್ಲಿನ ರಾಮ್ ಘಾಟ್ ನ ಪುಣ್ಯ ಜಲವನ್ನು ಸ್ಪರ್ಶಿಸಿದ ನಂತರ ೮೦೦ ಮೆಟ್ಟಿಲುಗಳನ್ನು ಹತ್ತಿ ಹನುಮಾನ್ ಧಾರಾ ಬೆಟ್ಟವನ್ನು ಹತ್ತೋಣ ಎಂದು ಹೇಳಿದರು. ನಮ್ಮ ಊಟವಾಗದೇ ಇದ್ದುದರಿಂದ ಊಟದ ವಿಷಯವನ್ನು ಪ್ರಸ್ತಾಪಿಸಿದೆ. ಇಂದು ಶನಿವಾರ, ಊಟದ ಮೊದಲೇ ಆಂಜನೇಯನ ದರ್ಶನದಿಂದ ವಿಶೇಷ ಪುಣ್ಯ ದೊರೆಯುತ್ತದೆ, ಎಂದು ಹೇಳಿ ಹೋಟೇಲೊಂದನ್ನು ಹೊಕ್ಕರು. ಅವರು ವೇಗವಾಗಿ ಹಿಂದಿ ಮಾತನಾಡುತ್ತಿದ್ದರಿಂದ ನನಗೆ ಸ್ಪಷ್ಟವಾಗಿ ಅರ್ಥವಾಗುತ್ತಿರಲಿಲ್ಲ. ಆದ್ದರಿಂದ ಅವರು ಹೋಟೇಲ್ ಗೆ ಹೋದದ್ದರಿಂದ ಹಸಿದಿದ್ದ ನಮಗೆಲ್ಲ ಸಂತಸವಾಯಿತು. ಆದರೆ ಅವರು ಹೋಟೇಲನ್ನು ಹೊಕ್ಕಿದ ಕಾರಣವೇ ಬೇರೆಯಾಗಿತ್ತು. ಸಾಮಾನ್ಯವಾಗಿ ಉತ್ತರಭಾರತದ ದೇವಾಲಯಗಳ ಸಮೀಪದ ಅಂಗಡಿ ಅಥವಾ ಹೋಟೇಲುಗಳಲ್ಲಿ ಚಪ್ಪಲಿಗಳನ್ನಿಟ್ಟು ಪ್ರಸಾದದ ಪ್ಯಾಕೆಟ್ ಗಳನ್ನು ಕೊಂಡು ದೇವಾಲಯದೊಳಗೆ ಒಯ್ಯುವುದು ಪದ್ಧತಿ. ದೇವಾಲಯದಲ್ಲಿ ಪ್ರಸಾದದ ಪ್ಯಾಕೆಟ್ ಗಳನ್ನು ದೇವರ ಸನ್ನಿಧಿಯಲ್ಲಿ ಸಮರ್ಪಿಸಿ ಪ್ರಸಾದವನ್ನು ಮನೆಗೆ ತರಲಾಗುತ್ತದೆ. ನಮ್ಮ ಕಡೆಯ ದೇವಾಲಯಗಳಲ್ಲಿರುವಂತೆ ದೇವಾಲಯಗಳ ಟ್ರಸ್ಟ ವತಿಯಿಂದ ಚೀಟಿ ಮಾಡಿಸಿಕೊಂಡು ಪ್ರಸಾದವನ್ನು ಪಡೆಯುವ  ಕ್ರಮವಿಲ್ಲ. ಹೀಗೆ ಅಂಗಡಿಗಳಲ್ಲಿ ಪ್ರಸಾದದ ಪ್ಯಾಕೆಟ್ (ಹೆಚ್ಚಿನ ಕಡೆಗಳಲ್ಲಿ ಲಾಡು ಅಥವಾ ಪೇಡೆ) ಗಳನ್ನು ಕೊಂಡೊದ್ದಕ್ಕೆ ಪ್ರತಿಯಾಗಿ ನಮ್ಮ ಚಪ್ಪಲಿಗಳ ರಕ್ಷಣೆಯ ಹೊಣೆಯನ್ನು ಅಂಗಡಿಯವರು ವಹಿಸಿಕೊಳ್ಳುತ್ತಾರೆ. ಸಂಗಮಲಾಲ್ ಶುಕ್ಲ ಹೋಟೆಲ್ ನಲ್ಲಿ ಚಪ್ಪಲಿಗಳನ್ನು ಬಿಚ್ಚಿಡಲು ಸೂಚಿಸಿ ಪ್ರಸಾದದ ಪ್ಯಾಕೆಟ್ ಗಳನ್ನು ಕೊಂಡರು. ಊಟ ಮಾಡದೇ ಇರುವುದರಿಂದ ಹಸಿದಿದ್ದ ನಮಗಾದ ನಿರಾಶೆಯನ್ನು ಗಮನಿಸಿ ಒಂದು ಗಂಟೆಯೊಳಗೆ ದರ್ಶನ ಮಾಡಿ ಹಿಂದಿರುಗಬಹುದು. ತದನಂತರ ಊಟ ಮಾಡಬಹುದೆಂದರು.

ಹನುಮಾನ್ ಧಾರಾ ರಾಮ ಲಕ್ಷ್ಮಣ ಸೀತೆಯರು ವಾಸವಾಗಿದ್ದ ಸ್ಥಳ. ಇಲ್ಲಿ ಹರಿಯುತ್ತಿರುವ ಜಲಧಾರೆಯೊಂದು ಬೆಟ್ಟದ ಮೇಲೆ ಹುಟ್ಟಿ ಸ್ವಲ್ಪ ದೂರ ಹರಿದು ಬೆಟ್ಟದ ಮೇಲೆಯೇ ಮಾಯವಾಗಿ ಬಿಡುತ್ತದೆ. ಬೆಟ್ಟದ ಕೆಳಗಿನ ಭಾಗವನ್ನು ಜಲಧಾರೆ ತಲುಪುವುದಿಲ್ಲ. ಶ್ರೀರಾಮನ ಸೂಚನೆಯಂತೆ ಲಂಕಾದಹನದ ನಂತರ ಆಂಜನೇಯ ಇದೇ ಜಾಗದಲ್ಲಿ ತನ್ನ ದೇಹದ ದಾಹವನ್ನು ಆರಿಸಿಕೊಂಡನೆಂಬ ಐತಿಹ್ಯವಿದೆ. ಬೆಟ್ಟದ ಮೇಲೆ ಸೀತೆ ಅಡುಗೆ ಮಾಡುತ್ತಿದ್ದಳು ಎಂಬುವುದರ ಸಾಕ್ಷೀಭೂತವಾದ ಒಲೆಗಳಿವೆ. ಬೆಟ್ಟವನ್ನು ಹತ್ತುತ್ತಿದ್ದಾಗ ಸಂಗಮಲಾಲ್ ಶುಕ್ಲ, ಬಾಲ್ಯಕಾಲದಲ್ಲಿ ಅವರು ದರ್ಶನಕ್ಕೆ

ಬರುತ್ತಿದ್ದಾಗ ಇಲ್ಲಿನ ವಾತಾವರಣ ಹೇಗಿತ್ತು ಈಗ ಹೇಗೆ ಬದಲಾಗಿದೆ ಎಂಬ ವಿಚಾರವನ್ನು ಹೇಳುತ್ತಿದ್ದರು. ಸಾಮಾನ್ಯವಾಗಿ ಇತರ ಎಲ್ಲಾ ವೃದ್ಧರಂತೆ ಈಗ ಪ್ರಕೃತಿ ಬದಲಾಗಿದೆ, ಕಾಲ ಹಾಳಾಗಿದೆ ಎಂಬ ದುಗುಡ ಅವರಲ್ಲೂ ಕಾಣುತ್ತಿತ್ತು. ಜೊತೆಗೆ ಅವರ ಕತೆ ಕೇಳಲು ನನ್ನಂತಹ ಬಕರಾ ಸಿಕ್ಕಿದ್ದರಿಂದ ಖುಷಿಯೂ ಆಗಿತ್ತು.

ಹನುಮಾನಧಾರಾ ದೇವಾಲಯದ ಮುಖ್ಯಸ್ಥರು ಸಂಗಮಲಾಲ್ ಶುಕ್ಲ ಅವರ ಆಪ್ತರಾಗಿದ್ದರು. ಅವರು ನಮ್ಮೆಲ್ಲರನ್ನೂ ಬರಮಾಡಿಕೊಂಡು ಕೆನೆಯಿಂದ ತಯಾರಿಸಿದ 'ರಬಡೀ' ಎಂಬ ಸಿಹಿತಿಂಡಿಯನ್ನು ನೀಡಿದರು. ಮಿತ್ರರು ಅದನ್ನು ಇಷ್ಟಪಡಲಿಲ್ಲವಾದ್ದರಿಂದ ಅರ್ಧದಷ್ಟನ್ನು ನಾನೇ ಕಬಳಿಸಿದೆ. ಉಳಿದರ್ಧವನ್ನು ಎಲ್ಲರೂ ಹಂಚಿಕೊಂಡು ಕಷ್ಟಪಟ್ಟು ತಿಂದರು. ಅಲ್ಲಿಂದ ಹೊರಟು ಬೋರೆ ಹಣ್ಣುಗಳನ್ನು ಕೊಂಡು ತಿನ್ನುತ್ತಾ ಹನುಮಾನಧಾರಾ ಬೆಟ್ಟವನ್ನಿಳಿದೆವು. ತದನಂತರ ಚಪ್ಪಲಿಗಳನ್ನಿಟ್ಟಿದ್ದ ಹೋಟೇಲ್ ನಲ್ಲಿ ಪೂರೀ ತಿಂದು ಕಾಮ್ದಾ ಗಿರಿಯೆಡೆಗೆ ಆಟೋ ಹತ್ತಿ ಹೊರಟೆವು.

ಕಾಮ್ದಾಗಿರಿ ಎಂದರೆ ಚಿತ್ರಕೂಟದ ಬೆಟ್ಟ. ವನವಾಸದ ಅವಧಿಯಲ್ಲಿ ಅನೇಕ ವರ್ಷಗಳನ್ನು ರಾಮ-ಸೀತೆ-ಲಕ್ಷ್ಮಣರು ಈ ಬೆಟ್ಟದಲ್ಲಿ ಕಳೆದಿದ್ದರು. ತುಲಸೀದಾಸರ ವಾಸ ಈ ಬೆಟ್ಟದ ಮೇಲಾಗಿತ್ತು. ಕಾಲಿದಾಸನ ಮೇಘದೂತದ ವರ್ಣಿಸಿದ ಇದೇ ಬೆಟ್ಟದ ಮೇಲೆ ವಾಸಿಸುತ್ತಿದ್ದ. ಇಂದಿಗೂ ಕೂಡಾ ಈ ಬೆಟ್ಟದಲ್ಲಿ ಅಪರೂಪದ ವನಸ್ಪತಿಗಳು ಕಾಣಸಿಗುತ್ತವೆ. ಆದ್ದರಿಂದ ಬೆಟ್ಟ ಹತ್ತುವುದನ್ನು ನಿಷೇಧಿಸಲಾಗಿದೆ. ಭಕ್ತರು ಈ ಬೆಟ್ಟದ ಸುತ್ತ ೫ ಕಿಮೀ ದೂರವನ್ನು ಪ್ರದಕ್ಷಿಣಾಕಾರದಲ್ಲಿ ಕ್ರಮಿಸುತ್ತಾರೆ. ಈ ಪ್ರದಕ್ಷಿಣಾ ಪಥದ ಅರ್ಧ ಭಾಗ ಉತ್ತರಪ್ರದೇಶದಲ್ಲಿದ್ದರೆ, ಉಳಿದರ್ಧ ಭಾಗ ಮಧ್ಯಪ್ರದೇಶದಲ್ಲಿದೆ. ಈ ಪರಿಕ್ರಮ ಪಥದಲ್ಲೇ ಪಾದುಕಾ ಪ್ರದಾನವಾದ ಸ್ಥಳವನ್ನೂ ಕಾಣಬಹುದು. ಈ ಪರಿಕ್ರಮ ಪಥದ ೫ ಕಡೆಗಳಲ್ಲಿ ಮಂದಿರಗಳನ್ನು ನಿರ್ಮಿಸಿ ಸೀತೆಯ ಮುಖದ ಪೂಜೆ ಮಾಡಲಾಗುತ್ತದೆ. ಆದ್ದರಿಂದ ಈ ಪ್ರದಕ್ಷಿಣೆಗೆ 'ಪಂಚಮುಖೀ ಪರಿಕ್ರಮಾ' ಎಂದೂ ಕರೆಯುತ್ತಾರೆ. ಪರಿಕ್ರಮ ಪಥದ ಇಕ್ಕೆಲಗಳಲ್ಲೂ ಅಂಗಡಿಗಳಿದ್ದು ಪೂಜಾ ಸಾಮಾಗ್ರಿಗಳ, ತಿಂಡಿಗಳ ಮಾರಾಟ ನಡೆಯುತ್ತದೆ. ಸಂಗಮಲಾಲ ಶುಕ್ಲ ನಾನು ನನ್ನ ಬಾಲ್ಯದಲ್ಲೂ ಪ್ರದಕ್ಷಿಣೆ ಮಾಡುತ್ತಿದ್ದೆ ಎಂದು ನೆನಪಿನ ಬುತ್ತಿಯನ್ನು ಬಿಚ್ಚುತ್ತಿದ್ದರೆ ನಾವು ಅಂಗಡಿಯಲ್ಲಿ ಜೋಳಪುರಿ ಕೊಂಡು ತಿನ್ನುತ್ತಿದ್ದೆವು. ಜೋಳಪುರಿಯನ್ನು ಅವರಿಗೆ ನೀಡಿದಾಗ ನಾನು ಪರಿಕ್ರಮದಲ್ಲಿ ಏನನ್ನೂ ತಿನ್ನುವುದಿಲ್ಲವೆಂದರು. ಅವರ ಶ್ರದ್ದೆಯನ್ನು

ಕಂಡು ನಮ್ಮ ಬಾಲಿಶವಾದ ವ್ಯವಹಾರದ ಬಗೆಗೆ ಇರುಸುಮುರುಸುಂಟಾಯಿತು. ಸುಮಾರು ಒಂದೂವರೆ ಗಂಟೆಗಳಲ್ಲಿ, ೬.೩೦ ರ ಸುಮಾರಿಗೆ ಪರಿಕ್ರಮಣೆ ಮುಗಿಯಿತು.

ನಾವು ಕರ್ನಾಟಕದವರಾದ್ದರಿಂದ ನಮ್ಮ ವಾಸದ ವ್ಯವಸ್ಥೆಯನ್ನು ಆದಿಚುಂಚನಗಿರಿ ಶಾಖಾ ಮಠದಲ್ಲಿ ಮಾಡುವುದೆಂದು ಸಂಗಮಲಾಲ್ ಶುಕ್ಲ ನಿಶ್ಚಯಿಸಿದ್ದರು. ೨೦೧೫ ರಲ್ಲಷ್ಟೇ ಶಾಖಾಮಠದ ಸ್ಥಾಪನೆಯಾಗಿದ್ದರಿಂದ ಅವರಿಗೂ ಮಠದ ಪರಿಚಯ ಅಷ್ಟಾಗಿ ಇರಲಿಲ್ಲ. ಮಹಾರಾಷ್ಟ್ರದ ಬ್ರಹ್ಮಚಾರಿಯೋರ್ವರು ಶಾಖಾಮಠದ ವ್ಯವಸ್ಥಾಪಕರಾಗಿದ್ದರು. ಮಠದಲ್ಲಿ ಭಜನಾ ಕಾರ್ಯಕ್ರಮವೊಂದು ನಡೆಯುತ್ತಿದ್ದರಿಂದ ಮಠದ ಕೋಣೆಗಳೆಲ್ಲವೂ ಭರ್ತಿಯಾಗಿದ್ದವು. ನಾವು ಕರ್ನಾಟಕದವರೆಂದು ತಿಳಿದ ಬ್ರಹ್ಮಚಾರಿಗಳು ಮಠದ ಕೋಣೆಗಳು ಭರ್ತಿಯಾಗಿದ್ದರೂ ವಿಶೇಷ ಆಸ್ಥೆಯಿಂದ ನಮಗೆ ವಾಸದ ವ್ಯವಸ್ಥೆಯನ್ನು ಕಲ್ಪಿಸಿದರು. ಅಲ್ಲದೇ ನಮಗೋಸ್ಕರ ವಿಶೇಷವಾಗಿ ದಕ್ಷಿಣ ಭಾರತದ ಅಡುಗೆಯನ್ನೂ ಮಾಡಿಸಿದರು. "ನನಗೆ ನಾಳೆ ಬೇರೆ ಕೆಲಸವಿದೆ. ನೀವು ರಿಕ್ಷಾವೊಂದರಲ್ಲಿ ಚಿತ್ರಕೂಟದ ಉಳಿದ ಸ್ಥಳಗಳನ್ನು ಸಂದರ್ಶಿಸಿ" ಎಂದು ಹೇಳಿ ಸಂಗಮಲಾಲ ಶುಕ್ಲ ಮಠದಿಂದ ಹೊರಟರು.

ಮರುದಿನ ಚಿತ್ರಕೂಟ ದರ್ಶನಕ್ಕೆ ಆಟೋ ವ್ಯವಸ್ಥೆಯನ್ನೂ ಮಠದ ಬ್ರಹ್ಮಚಾರಿಗಳೇ ಮಾಡಿದರು. ಹಿಂದಿನ ದಿನ ಚಿತ್ರಕೂಟದಲ್ಲಿ ಕೊರೆಯುವ ಚಳಿಯಿತ್ತು. ಆದರೂ ಮಠದಲ್ಲಿ ಒದಗಿಸಿದ ಹಾಸಿಗೆ-ಹೊದಿಕೆಗಳಿಂದ ನಿದ್ದೆ ಚೆನ್ನಾಗಿಯೇ ಬಂದಿತ್ತು. ಮರುದಿನ ಗೊತ್ತು ಮಾಡಿದ ಆಟೋದಲ್ಲಿ ಮೊದಲಿಗೆ ಸ್ಪಟಿಕ ಶಿಲಾ ಮಂದಿರಕ್ಕೆ ತೆರಳಿದೆವು. ರಾಮನ ಪಾದದ ಗುರುತುಗಳಿರುವ ಈ ಸ್ಥಳದಲ್ಲಿ ಕಾಕಾಸುರ ವೃತ್ತಾಂತ ನಡೆಯಿತೆಂದು ನಂಬಿಕೆ. ಚಿತ್ರಕೂಟದ ಪ್ರವಾಸದಲ್ಲಿ ಸಾಮಾನ್ಯವಾಗಿ ಎಲ್ಲಾ ಮಂದಿರಗಳಲ್ಲೂ ಕೋತಿಗಳ ಕಾರುಬಾರುನ್ನು ಕಾಣಬಹುದು. ಅದರಲ್ಲೂ ಕಪ್ಪು ಮೊಗದ ಉದ್ದ ಬಾಲದ ಕೋತಿಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ಪ್ರವಾಸಿಗಳು ತಿಂಡಿ ನೀಡುವುದರಿಂದ ಅವರ ಚೀಲಗಳ ಮೇಲೆ ಕೋತಿಗಳ ಕಣ್ಣಿರುತ್ತದೆ. ಸ್ಪಟಿಕ ಶಿಲಾ ಮಂದಿರದಲ್ಲಂತೂ ಕೋತಿಗಳು ನಮ್ಮನ್ನು ಸುತ್ತುವರೆದು ಆಕ್ರಮಿಸಿಕೊಂಡು ಬಿಟ್ಟಿದ್ದವು.

ಕೋತಿಗಳ ಹಿಂಡಿನಿಂದ ಹೇಗೋ ತಪ್ಪಿಸಿಕೊಂಡು ಅಲ್ಲಿಂದ 'ರಾಮದರ್ಶನ ಭವನ'ಕ್ಕೆ ತೆರಳಿದೆವು. ಭವನದ ಮುಂಭಾಗದಲ್ಲಿ ಆಂಜನೇಯನ ಬೃಹತ್ ವಿಗ್ರಹವಿದೆ. ಒಳಭಾಗದಲ್ಲಿ ಇಂಡೋನೇಷ್ಯಾ, ಫ್ರಾನ್ಸ್ ಮುಂತಾದ ವಿವಿಧ ದೇಶಗಳ ಭಾಷೆಗಳಿಗೆ ತರ್ಜುಮೆಯಾದ ರಾಮಾಯಣದ ಪ್ರತಿಗಳನ್ನೂ, ವಿವಿಧ ದೇಶಗಳ ನಾಟ್ಯ ಸಂಸ್ಕೃತಿಗಳಲ್ಲಿ ಬಿಂಬಿತವಾದ ರಾಮಾಯಣದ ಚಿತ್ರಳನ್ನೂ ಮುಖವರ್ಣಿಕೆಗಳನ್ನೂ

ಪ್ರದರ್ಶನಕ್ಕಿಡಲಾಗಿದೆ. ಸಂಪೂರ್ಣ ರಾಮಾಯಣದ ಪ್ರಮುಖ ಘಟ್ಟಗಳನ್ನು ೨೦-೨೫ ಚಿತ್ರ ಹಾಗೂ ಉಬ್ಬು ಶಿಲ್ಪಗಳ ಮುಖಾಂತರ ಅದ್ಭುತವಾಗಿ ವಿವರಿಸಲಾಗಿದೆ. ಮಹಾರಾಷ್ಟ್ರದ ಚಿತ್ರಕಲಾ ತಂಡವೊಂದರಿಂದ ನಿರ್ಮಿಸಲಾದ ಈ ಚಿತ್ರಗಳನ್ನು ನೋಡುವುದೇ ಕಣ್ಣಿಗೊಂದು ಹಬ್ಬ. ಮುಂದೆ ಚಿತ್ರಕೂಟದಿಂದ ೧೬ ಕಿಮೀ ದೂರದಲ್ಲಿನ ಅನಸೂಯಾದೇವೀ ಮಂದಿರಕ್ಕೆ ತೆರಳಿದೆವು. ಇಲ್ಲಿಂದಲೇ ದಂಡಕಾರಣ್ಯ ಆರಂಭವಾಗುತ್ತದೆ. ಅನಸೂಯಾದೇವೀ ಸೀತೆಗೆ ಪಾತಿವ್ರತ್ಯವನ್ನು ಬೋಧಿಸಿದ ಸ್ಥಳ ಇದಾಗಿದೆ. ತದನಂತರ ಅಲ್ಲಿಂದ ಗುಪ್ತ ಗೋದಾವರೀ ಮಂದಿರಕ್ಕೆ ಭೇಟಿಯಿತ್ತೆವು. ಇಲ್ಲಿ ಎರಡು ಗುಹೆಗಳಿವೆ. ಮೊದಲನೇ ಗುಹೆಯೊಳಗೆ ಶಿವನ ದೇವಾಲಯವಿದೆ. ಎರಡನೇ ಗುಹೆಯೊಳಗೆ ಸುಮಾರು ೨೦೦ ಮೀ ದೂರ ನಡೆದರೆ ಗುಪ್ತ ಗೋದಾವರಿಯ ಉದ್ಭವಸ್ಥಾನ ಕಾಣಸಿಗುತ್ತದೆ. ಈ ಗುಹೆಗಳ ಕಲ್ಲುಗಳು ಬೂದು ಬಣ್ಣದಲ್ಲಿದ್ದು, ನುಣುಪಾಗಿವೆ. ಶ್ರೀರಾಮಚಂದ್ರನ ದರ್ಶನಕ್ಕೆ ಗೋದಾವರೀ ಗುಪ್ತವಾಗಿ ಪ್ರಕಟಗೊಂಡ ಸ್ಥಾನ ಇದಾಗಿದೆ. ಸ್ಫಟಿಕಶಿಲಾ, ರಾಮದರ್ಶನ, ಅನಸೂಯಾ ಮಂದಿರ ಹಾಗೂ ಗುಪ್ತಗೋದಾವರೀ ಈ ನಾಲ್ಕು ಸ್ಥಾನಗಳಿಗೆ ಚಾರ್ ಧಾಮ್ ಎಂದು ಕರೆಯುತ್ತಾರೆ. ಅಲ್ಲಿಂದ ಆದಿಚುಂಚನಗಿರಿ ಮಠದ ಪಕ್ಕದಲ್ಲೇ ಇದ್ದ ಜಾನಕೀ ಕುಂಡದ ದರ್ಶನವನ್ನೂ ಪಡೆದೆವು. ವನವಾಸ ಕಾಲದಲ್ಲಿ ಶುದ್ಧ ನೀರನ್ನರಸುತ್ತಾ ಬಂದ ಸೀತೆ ಈ ಸ್ಥಳದಲ್ಲಿ ಸ್ನಾನ ಮಾಡಿದಳು ಎಂಬ ಪ್ರತೀತಿಯಿದೆ. ಇಷ್ಟನ್ನು ಸುತ್ತುವಾಗಲೇ ಗಂಟೆ ಒಂದಾಗಿದ್ದರಿಂದ ಭರತಕುಂಡ ಹಾಗೂ ಸೂರ್ಯಕುಂಡಗಳಿಗೆ ಹೋಗಲಾಗಲಿಲ್ಲ. ಅದಾಗಲೇ ಮಠದಲ್ಲಿ ಊಟ ಸಿದ್ಧವಾಗಿತ್ತು. ಊಟ ಮಾಡಿ ವಿಶ್ರಾಂತಿ ತೆಗೆದುಕೊಳ್ಳುವ ಇಚ್ಛೆ ಎಲ್ಲರಿಗೂ ಇತ್ತಾದರೂ, ಮಲಗಿದರೆ ಸಂಜೆಯೊಳಗೆ ಪ್ರಯಾಗ ತಲುಪುವುದು ಅಸಾಧ್ಯವೆಂದು ಹಿಂದಿರುಗಿ ಹೊರಡಲು ಸಜ್ಜಾದೆವು. ಮಠದ ಬ್ರಹ್ಮಚಾರಿಗಳಿಗೆ ವಂದಿಸಿದಾಗ "ಕರ್ನಾಟಕದಿಂದ ಭಕ್ತರು ಬರುವುದೇ ಅಪರೂಪ ನೀವೇನೂ ಕೊಡುವುದು ಬೇಡ" ಎಂದರು. ಆದರೂ ನಮ್ಮ ಸಮಾಧಾನಕ್ಕಾಗಿ ಕಾಶಿಯ ಚಿಂತಾಮಣಿ ಭಟ್ಟರಿಗೆ ನೀಡಿದಂತೆ ಯತ್ಕಿಂಚಿತ್ ಹಣವನ್ನು ಅವರ ಕೈಯಲ್ಲಿಟ್ಟೆವು. ಬಸ್ ಸ್ಟಾಂಡ್ ಗೆ ಹಿಂದಿರುಗುವಾಗ ಶೇರ್ ಆಟೋದಲ್ಲಿ ೧೫ ಕ್ಕೂ ಹೆಚ್ಚು ಜನರನ್ನು ತುಂಬಿದ್ದ. ಡ್ರೈವರ್ ನ ಬಲ ಪಕ್ಕದಲ್ಲಿದ್ದ ನಾನು ಹೇಗೋ ನೇತಾಡುತ್ತಾ ಬಸ್ ಸ್ಟಾಂಡ್ ತಲುಪಿದೆ. ಸಂಗಮ್ ಲಾಲ್ ಶುಕ್ಲಾರನ್ನೂ ಮಠದ ಬ್ರಹ್ಮಚಾರಿಗಳನ್ನೂ ನೆನೆಯುತ್ತಾ ರಾತ್ರೆ ೭.೩೦ ರ ಸುಮಾರಿಗೆ ಪ್ರಯಾಗ ತಲುಪಿದೆವು.

ಮತ್ತೊಂದು ವಾರ ಯಥಾಪ್ರಕಾರ ತರಗತಿಗಳು ನಡೆದವು. ಶುಕ್ರವಾರದಂದು ರವಿಶಂಕರ ಊರಿಗೆ ಹೊರಟ. ಶನಿವಾರ-ಭಾನುವಾರ ರಜೆಯಿದ್ದರೂ ತಿರುಗಾಟದ ಉತ್ಸಾಹ ಯಾರಿಗೂ ಇರಲಿಲ್ಲ. ಅಲ್ಪ ಪ್ರಮಾಣದ ಅನಾರೋಗ್ಯ ಹಾಗೂ ಒಂದು ತಿಂಗಳ ಕಾಲ ಪುರುಸೊತ್ತಿಲ್ಲದೇ ನಡೆಸಿದ ತಿರುಗಾಟಗಳು ವಿಶ್ರಾಂತಿ ಬಯಸುವಂತೆ ಮಾಡಿದ್ದವು. ಆದರೂ ಸಾಯಂಕಾಲ ಆನಂದ ಭವನವನ್ನು ನೋಡಿ ಬರುವುದೆಂದು ತೀರ್ಮಾನಿಸಿದವು. ಆನಂದ ಭವನವೆಂದರೆ ಜವಾಹರ್ ಲಾಲ್ ನೆಹರೂ ಅವರ ಮನೆ. ಆ ಮನೆಯಲ್ಲಿ ಅವರು ಬಳಸಿದ ವಸ್ತುಗಳನ್ನು ಸಂಗ್ರಹಿಸಿ ಇಡಲಾಗಿದೆ. ನೆಹರೂರವರ ವಿಷಯದಲ್ಲಿ ಅಜ್ಞಾನದಿಂದಲೋ ಅತಿಜ್ಞಾನದಿಂದಲೋ ಶ್ರದ್ಧೆಯಂತೂ ಇರಲಿಲ್ಲ. ಆದರೆ ಪ್ರಸಿದ್ಧ ವ್ಯಕ್ತಿಯೋರ್ವರಿಗೆ ಸಂಬಂಧಿಸಿದ ವಸ್ತು ಸಂಗ್ರಹಾಲಯವೊಂದು ಪಕ್ಕದಲ್ಲೇ ಇರುವಾಗ ನೋಡದೇ ಇರಲು ಮನಸ್ಸಾಗಲಿಲ್ಲ. ಬಹುಶಃ ಒಸಾಮಾ ಬಿನ್ ಲಾಡೆನ್ ಸ್ಮಾರಕವಿದ್ದರೂ ಅದನ್ನು ನೋಡಲು ಹೋಗುತ್ತಿದ್ದನೇನೋ. ಆದರೆ ನಾವು ಆ ದಿನ ನೆಹರೂಗೆ ಸಂಬಂಧಿಸಿದ ವಸ್ತು ಸಂಗ್ರಹಾಲಯವನ್ನು ನೋಡಿ ಮರುದಿನದ ರಜಾದಿನವನ್ನು ನೆಹರೂರನ್ನು ಹಳಿಯಲಿಕ್ಕೋಸ್ಕರ ಹಾಳು ಮಾಡುವುದು ಬೇಡ ಎಂಬುವುದು ದೈವನಿಶ್ಚಯವಾಗಿತ್ತೇನೋ. ಆನಂದ ಭವನದ ದ್ವಾರದಲ್ಲಿ ಪ್ರವಾಸಕ್ಕೆಂದು ಬಂದಿದ್ದ ಶಾಲಾ ವಿದ್ಯಾರ್ಥಿಗಳು ಜಮಾಯಿಸಿದ್ದರು. ಅಂತಹ ಜನಸಂದಣಿಯಲ್ಲಿ ಹೋಗಿ ಆನಂದಭವನವನ್ನು ನೋಡುವ ಅವಶ್ಯಕತೆ ಕಾಣಲಿಲ್ಲ. ಇನ್ನೊಂದು ದಿನ ಬಂದರಾಯಿತು ಅಂದುಕೊಂಡು ಪಕ್ಕದಲ್ಲೇ ಇದ್ದ ಭಾರದ್ವಾಜಾಶ್ರಮಕ್ಕೆ ತೆರಳಿದೆವು. ಮಹರ್ಷಿ ಭಾರದ್ವಾಜರು ವಾಸಿಸಿದ್ದ ಈ ಆಶ್ರಮದಲ್ಲಿ, ನಾವು ಹೋದಾಗ ಹೋಮವೊಂದು ನಡೆಯುತ್ತಿತ್ತು. ಅಲ್ಲಿಂದ ಸಮೀಪದ ಭಾರದ್ವಾಜ ಪಾರ್ಕ್ ಗೆ ತೆರಳಿ ಪಾರ್ಕಿನಲ್ಲಿ ನಡೆಯುತ್ತಿದ್ದ ಬಗೆಬಗೆಯ ವಿಲಾಸಗಳನ್ನು ಕಂಡೆವು. ಪಕ್ಕದಲ್ಲಿದ್ದ ಬೇಕರಿಯೊಂದರಲ್ಲಿ ಗುಲಾಬ್ ಜಾಮೂನ್, ರಾಜ್ ಮಲಾಯಿ, ರಸ್ ಮಲಾಯಿ ಮುಂತಾದ ವಿಶಿಷ್ಟ ಖಾದ್ಯಗಳನ್ನು ಸವಿದು ಹಣ್ಣಿನ ರಸ (ಜ್ಯೂಸ್ ಗಿಂತ ಭಿನ್ನ, ಸಕ್ಕರೆಯನ್ನೂ ಹಾಕದ ಮುಸುಂಬಿ-ದಾಳಿಂಬೆ-ಅನನಾಸ್ ಮೊದಲಾದ ಹಣ್ಣುಗಳ ರಸ) ಕುಡಿದೆವು.

ಮಾರನೆಯ ದಿನವೂ ತಿರುಗಾಟದ ಉತ್ಸಾಹವಿರಲಿಲ್ಲ. ಮಧ್ಯಾಹ್ನದ ವೇಳೆಗೆ ಗಂಗಾಸ್ನಾನ ಮಾಡುವ ಇಚ್ಛೆಯಾಯಿತು. ಗಣೇಶ ಪ್ರಸಾದನಂತೂ ಗಂಗಾಸ್ನಾನಕ್ಕೆ ಬರುವುದಿಲ್ಲ ಎಂಬುವುದನ್ನು ಅರಿತಿದ್ದೆ. ಗಣೇಶ ಹಾಗೂ ಮುರಳಿಕೃಷ್ಣರು ನಾಗವಾಸುಕೀ ಮಂದಿರಕ್ಕೆ ತೆರಳುವಾಗ ಕೊಳಚೆ ನೀರು ಗಂಗೆಯನ್ನು ಸೇರುವುದನ್ನು

ಕಂಡದ್ದರಿಂದ ಅವರಲ್ಲಿ ವಿಷಯವನ್ನು ಪ್ರಸ್ತಾಪಿಸಿದರೆ ಸ್ವಚ್ಚತೆಯ ಬಗ್ಗೆ ವಿಶ್ಲೇಷಣೆ ನಡೆಸಿ ನನ್ನನ್ನೂ ತಡೆಯುತ್ತಾರೆ ಎಂದೆನಿಸಿತು. ಆದ್ದರಿಂದ ಬಟ್ಟೆಯನ್ನು ಹಿಡಿದುಕೊಂಡು ಗಂಗಾಸ್ನಾನ ಮಾಡಿಬರುತ್ತೇನೆ ಎಂದು ಮಿತ್ರರಿಗೆ ಸೂಚನೆಯನ್ನಿತ್ತು ಅವರ ಪ್ರತಿಕ್ರಿಯೆಗೂ ಕಾಯದೇ ಗಂಗೆಯತ್ತ ದಾಪುಗಾಲನ್ನಿತ್ತೆ. ಸ್ನಾನ ಮಾಡಿ ರೂಮಿಗೆ ಮರಳಿದಾಗ ಸ್ನಾನ ಮಾಡಿ ಬಂದ ನನ್ನನ್ನು ಕಂಡ ಗಣೇಶ, "ನಾನೂ ಗಂಗಾಸ್ನಾನಕ್ಕೆ ಬರುತ್ತಿದ್ದೆ" ಎಂದು ಮರುಗಿದ. ಭಾರತೀಯರು ಗಂಗೆ ಅಶುದ್ಧವಾದರೂ ಅದರಲ್ಲಿ ಪವಿತ್ರತೆಯನ್ನು ಕಾಣುತ್ತಾರೆ ಎಂಬುವುದನ್ನು ಪ್ರತ್ಯಕ್ಷವಾಗಿ ಕಂಡು ಹೆಮ್ಮೆಯಾಯೆನಿಸಿತು. ಮಧ್ಯಾಹ್ನದ ಸಮಯದವನ್ನು ಅಧ್ಯಯನಾದಿಗಳಲ್ಲಿ ಕಳೆದೆವು.

ಸೋಮವಾರದಿಂದ ಪುನಃ ತರಗತಿಗಳು ಆರಂಭವಾದವು. ಬುಧವಾರದ ದಿನ ರೈಲ್ವೇ ಮೇಲ್ಸೇತುವೆ ಕೆಲಸ ಆರಂಭವಾದುದರಿಂದ ಪೇಟೆಯ ರಸ್ತೆಯೊಂದರ ಸಂಚಾರ ಸ್ಥಗಿತಗೊಳಿಸಿದ್ದರು. ಪೇಟೆಯಿಡೀ ವಾಹನ ಸಂದಣಿಯಿಂದ ತುಂಬಿಕೊಳ್ಳುತ್ತಿತ್ತು. ಆದ್ದರಿಂದ ಬುಧವಾರ ವಿದ್ಯಾಲಯದಿಂದ ೪ ಕಿಮೀ ದೂರ ನಡೆದುಕೊಂಡೇ ವಾಪಾಸ್ಸಾದೆವು. ಗುರುವಾರ ಶುಕ್ರವಾರಗಳಲ್ಲಿ ವಾಹನ ಸಂದಣಿಯಿದ್ದರೂ ರಿಕ್ಷಾದಲ್ಲಿ ಅರ್ಧ ಗಂಟೆ ಪ್ರಯಾಣಿಸುತ್ತಿದ್ದೆವು.

ಒಂದು ದಿನ ಶೃಂಗೇರಿ ವಿದ್ಯಾಪೀಠದ ಮುಕ್ತ ಸ್ವಾಧ್ಯಾಯ ಪೀಠದ(distance education) ಸಮನ್ವಯಕರಾದ ವೆಂಕಟೇಶ ಮೂರ್ತಿ, ನನಗೊಂದು ಕೆಲಸವನ್ನು ವಹಿಸಲು ದೂರವಾಣಿ ಕರೆಯನ್ನು ಮಾಡಿದರು. ವಿದ್ಯಾಪೀಠದ ಮುಕ್ತ ಸ್ವಾಧ್ಯಾಯ ಪೀಠದ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ಪಾಠಗಳ ಧ್ವನಿಮುದ್ರಣವನ್ನು ನಡೆಸಬೇಕಾಗಿತ್ತು. ಮುಕ್ತ ಸ್ವಾಧ್ಯಾಯ ಪೀಠದ ಪಾಠ್ಯಕ್ರಮದಲ್ಲಿ 'ಸಾಹಿತ್ಯ ದರ್ಪಣ' ಹಾಗೂ 'ಕಾವ್ಯಪ್ರಕಾಶ'ದ ಪಾಠಗಳನ್ನು ನಿನಗೆ ಸಮಯವಿದ್ದಷ್ಟು, ದಿನಕ್ಕೆ ಒಂದು ಅಥವಾ ಎರಡು ಪಾಠಗಳ ಧ್ವನಿಮುದ್ರಣವನ್ನು ಮಾಡಿಕೊಡುವಂತೆ ತಿಳಿಸಿದ್ದರು. ಆದರೆ ನನ್ನ ಬಳಿ ಮುಕ್ತಸ್ವಾಧ್ಯಾಯ ಪೀಠದ ಪುಸ್ತಕಗಳಿರಲಿಲ್ಲ. "ಪ್ರಯಾಗದಲ್ಲಿ ವಿಶೇಷ ಅಧ್ಯಯನ ನಡೆಸಲು ಸಾಧ್ಯವಿಲ್ಲ" ಎಂದು ಹಿಂದಿನ ವರ್ಷ ಪ್ರಯಾಗದಲ್ಲಿದ್ದ ಮಿತ್ರರು ಹೇಳಿದ್ದರಿಂದ ಕೇವಲ ಅತ್ಯವಶ್ಯಕವಾದ ಪುಸ್ತಕಗಳನ್ನು ಮಾತ್ರ ತೆಗೆದುಕೊಂಡು ಬಂದಿದ್ದೆ. ಸಾಹಿತ್ಯದರ್ಪಣ ಹಾಗೂ ಕಾವ್ಯಪ್ರಕಾಶದ ಪುಸ್ತಕಗಳು ನನ್ನ ಬಳಿಯಲ್ಲಿರಲಿಲ್ಲ. ವೆಂಕಟೇಶ ಮೂರ್ತಿಯವರ ಸಲಹೆಯಂತೆ ಪ್ರಯಾಗದಲ್ಲಿರುವ ನಮ್ಮ ವಿದ್ಯಾಲಯದ ಮುಕ್ತ ಸ್ವಾಧ್ಯಾಯ ಪೀಠದ ಅಧಿಕಾರಿಗಳಲ್ಲಿ ಪುಸ್ತಕದ ಬಗ್ಗೆ ವಿಚಾರಿಸಿದಾಗ "ಪ್ರ್ಯೂನ್ ನನ್ನು ಕೇಳಬೇಕು" ಎಂದು ಹೇಳಿದರು. ಪ್ರ್ಯೂನ್ ಬಳಿ ಕೇಳಿದರೆ

"ಅಧಿಕಾರಿಯನ್ನು ಕೇಳಬೇಕು" ಎನ್ನುತ್ತಿದ್ದ. ೨-೩ ದಿನಗಳ ನಂತರ ಇಬ್ಬರೂ ಒಟ್ಟಾಗಿ ಕಾಣಸಿಕ್ಕಾಗ ಇಬ್ಬರ ಮುಖವನ್ನೂ ಏಕಕಾಲದಲ್ಲಿ ದಿಟ್ಟಿಸಿ ಪುಸ್ತಕಗಳ ಬಗ್ಗೆ ವಿಚಾರಿಸಿದೆ. ಇಬ್ಬರೂ ಒಟ್ಟಿಗೆ ಏನೋ ಹಾರಿಕೆಯ ಉತ್ತರವನ್ನು ಕೊಟ್ಟು ನನ್ನನ್ನು ಮೂರ್ಖನನ್ನಾಗಿಸಿದರು. "ಈತನಿಗೆ ಸ್ವಾಧ್ಯಾಯಪೀಠದ ಪುಸ್ತಕವನ್ನು ಏಕೆ ನೀಡಬೇಕು" ಎಂಬ ಅಸಡ್ಡೆ ಅವರಲ್ಲಿತ್ತು. ಪುಸ್ತಕ ಇಲ್ಲ ಎಂಬ ಕ್ಷುಲ್ಲಕ ಕಾರಣಕ್ಕಾಗಿ ವೆಂಕಟೇಶಮೂರ್ತಿಯವರ ಮಾತನ್ನು ತಿರಸ್ಕರಿಸುವುದು ಯುಕ್ತವೆಂದೆನಿಸಲಿಲ್ಲ.

ಸಾಹಿತ್ಯದರ್ಪಣ ಹಾಗೂ ಕಾವ್ಯಪ್ರಕಾಶ ಗ್ರಂಥಗಳನ್ನು ಓದಿ ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದರೂ ಕೂಡಾ ಗ್ರಂಥದಲ್ಲಿನ ವಿಷಯಗಳನ್ನು ಗ್ರಂಥವಿಲ್ಲದೇ ಮತ್ತೊಬ್ಬರಿಗೆ ಬೋಧಿಸುವುದು ಅಸಾಧ್ಯವಾಗಿತ್ತು. ಆದರೆ ಗ್ರಂಥಗಳಿದ್ದರೆ ಬೋಧಿಸಬಹುದು ಎಂಬ ಆತ್ಮವಿಶ್ವಾಸವೂ ಇತ್ತು. ಪ್ರಯಾಗದಲ್ಲಿ ಅನೇಕ ಗ್ರಂಥಗಳನ್ನು ಪರಿಶೀಲಿಸುವ ಪ್ರಸಂಗ ಬಂದೊದಗಬಹುದೆಂಬ ಕಲ್ಪನೆಯಿತ್ತು. ಹಾಗೇನಾದರೂ ತುರ್ತಾಗಿ ಗ್ರಂಥಗಳ ಆವಶ್ಯಕತೆಯುಂಟಾದರೆ ಅದನ್ನು ಪಡೆದುಕೊಳ್ಳುವ ಅನುಕೂಲತೆಯನ್ನೂ ಮಾಡಿಕೊಂಡಿದ್ದೆ. ಇತ್ತೀಚಿನ ವರ್ಷಗಳಲ್ಲಿ ಎಲ್ಲರ ಸ್ಮಾರ್ಟ್ ಫೋನ್ ಗಳಲ್ಲೂ ಸಾಮಾನ್ಯವಾಗಿರುವ ವಾಟ್ಸಾಪ್ ನ ಮುಖಾಂತರ ಸ್ವಲ್ಪವಾದರೂ ಒಳ್ಳೆಯ ಪ್ರಯೋಜನವನ್ನು ಪಡೆಯಬೇಕೆಂಬುದು ನನ್ನ ಇಚ್ಛೆಯಾಗಿತ್ತು. ಶೃಂಗೇರಿಯ ವಿದ್ಯಾಪೀಠದಲ್ಲಿ ಆಚಾರ್ಯ ದ್ವಿತೀಯ ವರ್ಷದ ವಿದ್ಯಾರ್ಥಿನಿಯಾದ ಸೌಂದರ್ಯಲಕ್ಷ್ಮೀಯ ಬಳಿ ಯಾವುದಾದರೂ ಗ್ರಂಥಗಳ ಪರಿಶೀಲನೆ ಮಾಡುವ ಅವಶ್ಯಕತೆ ಉಂಟಾದರೆ ನಾನು ಹೇಳಿದ ಪುಟಗಳ ಫೋಟೋ ತೆಗೆದು ಕಳುಹಿಸು ಎಂದು ಸೂಚಿಸಿದ್ದೆ. ಅದರಂತೆ ಸಾಹಿತ್ಯದರ್ಪಣ ಹಾಗೂ ಕಾವ್ಯಪ್ರಕಾಶಗಳಲ್ಲಿ ಧ್ವನಿ ಮುದ್ರಣಕ್ಕೆ ಆವಶ್ಯಕವಾದ ಪುಟಗಳ ಫೋಟೋ ತೆಗೆದು ಸೌಂದರ್ಯಲಕ್ಷ್ಮೀ ಕಳುಹಿಸುತ್ತಿದ್ದಳು. ಅದೃಷ್ಟಕ್ಕೆ ನಮ್ಮ ವಿದ್ಯಾವಾರಿಧಿ ತರಗತಿಗಳಲ್ಲಿ ಪ್ರೊಫೆಸರ್ ಗಳಿಗೆ ಸಹಾಯಕರಾಗಿದ್ದ ಅಜಿತ ಕುಮಾರ ಸಾಹು ಮುಕ್ತಸ್ವಾಧ್ಯಾಯ ಪೀಠದಲ್ಲಿ ಆಚಾರ್ಯ ತರಗತಿಯಲ್ಲಿ ಅಧ್ಯಯನ ನಡೆಸುತ್ತಿದ್ದರು. ಅವರಿಂದಲೂ ಪಾಠ್ಯಪುಸ್ತಕಗಳನ್ನು ತೆಗೆದುಕೊಂಡು ಪಾಠಗಳನ್ನು ನಡೆಸಲು ಸಾಧ್ಯವಾಯಿತು.

ಪಾಠಗಳ ಧ್ವನಿಮುದ್ರಣವನ್ನು ನಡೆಸಲು ಕೇವಲ ಪಾಠ್ಯಪುಸ್ತಕಗಳು ಮಾತ್ರ ಸಾಕಾಗಿರಲಿಲ್ಲ. ನಿಃಶಬ್ದವಾದ ಸ್ಥಳವೂ ಅತ್ಯವಶ್ಯವಾಗಿತ್ತು. ಪ್ರಯಾಗದ ಪೇಟೆಯ ಮಧ್ಯದಲ್ಲಿ ವಾಸವಾದ್ದರಿಂದ ೨೦ ನಿಮಿಷಗಳ ಪಾಠವನ್ನು ರೆಕಾರ್ಡ್ ಮಾಡಲು ಗಲಾಟೆ ಇಲ್ಲದ ಸ್ಥಳ ದುರ್ಲಭವಾಗಿತ್ತು. ಮೊದಲನೇ ದಿನ ಗಂಗಾ ತೀರದಲ್ಲಿ ರೆಕಾರ್ಡ್

ಮಾಡಿದರೂ ಮುಂದಿನ ದಿನಗಳಲಿ ಅಲ್ಲಿಗೆ ಹೋಗುವುದು ಬೇಡವೆನಿಸಿತು. ಗಂಗಾ ತೀರದ ಜೋಪಡಿಗಳಲ್ಲಿ ವಾಸಿಸುತ್ತಿದ್ದ ಜನ ನದಿಯ ತೀರದುದ್ದಕ್ಕೂ ಗಲೀಜು ಮಾಡುತ್ತಿದ್ದರು. ಅಲ್ಲದೇ ಪ್ರತಿದಿನವೂ ಕ್ಲಪ್ತ ಸಮಯವೂ ದೊರೆಯುತ್ತಿರಲಿಲ್ಲ. ಸಂಜೆ ೫ ಗಂಟೆಗೇ ಕತ್ತಲಾಗುತ್ತಿದ್ದರಿಂದ ಬೆಳಕೂ ಹಾಗೂ ನಿಃಶಬ್ದತೆಗಳು ಒಟ್ಟಿಗೇ ದೊರೆಯುತ್ತಿರಲಿಲ್ಲ. ನಾವು ವಿದ್ಯಾಲಯದಿಂದ ಹಿಂದಿರುಗುವಾಗಲೇ ಗಂಟೆ ೫.೩೦ ಆಗಿರುತ್ತಿತ್ತು. ಆದ್ದರಿಂದ ರೆಕಾರ್ಡ್ ಮಾಡಲು ಯಾವುದಾದರೂ ದಾರಿಯನ್ನು ಹುಡುಕುವುದು ಅನಿವಾರ್ಯವಾಯಿತು. ಹೇಗೂ ಮಧ್ಯಾಹ್ನ ಒಂದೂವರೆ ಗಂಟೆಗಳ ಕಾಲ ಊಟದ ಬಿಡುವಿತ್ತು. ಊಟದ ನಂತರ ಆಜಾದ್ ಪಾರ್ಕ್ ನಲ್ಲಿ ರೆಕಾರ್ಡ್ ಮಾಡುವುದೆಂದು ತೀರ್ಮಾನಿಸಿದೆ. ನಮ್ಮ ವಿದ್ಯಾಪೀಠದ ಮುಖ್ಯ ಭವನ ಆಜಾದ್ ಪಾರ್ಕ್ ನಲ್ಲೇ ಇದ್ದುದರಿಂದ ವಿದ್ಯಾರ್ಥಿಗಳಿಗೆ ಪ್ರವೇಶ ಶುಲ್ಕವಿರಲಿಲ್ಲ. ಅಲ್ಲದೇ ಪಾರ್ಕ್ ಜನರಿಂದ ತುಂಬಿಕೊಂಡಿದ್ದರೂ ನಿಃಶಬ್ದವಾಗಿರುತ್ತಿತ್ತು. ಪಾರ್ಕ್ ನ ಮರಗಳಡಿಯಲ್ಲಿ ಅನೇಕ ಜೋಡಿ ಹಕ್ಕಿಗಳು ಚಿಲಿಪಿಲಿಗುಟ್ಟುತ್ತಿದ್ದರೂ ಆ ಶಬ್ದದಿಂದ ನನ್ನ ಕೆಲಸಕ್ಕೆ ಬಾಧವಿರಲಿಲ್ಲ. ಸಾಮಾನ್ಯವಾಗಿ ಪ್ರತಿದಿನವೂ ಊಟದ ಬಿಡುವಿನಲ್ಲಿ ವೆಂಕಟೇಶಮೂರ್ತಿಯವರು ನನಗೆ ವಹಿಸಿದ್ದ ಕೆಲಸವನ್ನು ಸಾಧ್ಯವಾದಷ್ಟು ಮಟ್ಟಿಗೆ ನಿರ್ವಹಿಸುತ್ತಿದ್ದೆ.

ಗಂಗಾನದಿಯ ತೀರದಲ್ಲೇ ವಾಸಿಸುತ್ತಿದ್ದರಿಂದ ಮನಸ್ಸು ಮಾಡಿದ್ದರೆ ನಿತ್ಯವೂ ಗಂಗಾಸ್ನಾನ ಮಾಡುವುದೇನೂ ಕಷ್ಟವಾಗಿರಲಿಲ್ಲ. ಆದರೆ ಚಳಿಯ ಹೆದರಿಕೆಯೇ ಮನಸ್ಸನ್ನು ಬಾಧಿಸುತ್ತಿತ್ತು. ಕಳೆದ ವರ್ಷ ಪ್ರಯಾಗದಲ್ಲಿದ್ದ ಮಿತ್ರರು ಉತ್ತರಾದಿ ಮಠದ ಮುಖ್ಯಸ್ಥ ರಾಘವೇಂದ್ರ ಆಚಾರ್, ಕಾಶೀ ಮಠದ ಸುಧೀಶ್ ಶೆಣೈ, ಊರಿನಿಂದ ಫೋನ್ ಮಾಡುತ್ತಿದ್ದ ಬಂಧು ಮಿತ್ರರು ಹೀಗೆ ಎಲ್ಲರೂ ಚಳಿಯ ಬಗ್ಗೆ ಅತಿಶಯವಾಗಿ ಹೇಳಿ ನಮ್ಮಲ್ಲಿ ಚಳಿ ಹುಟ್ಟುವಂತೆ ಮಾಡಿದ್ದರು. ಪ್ರಯಾಗಕ್ಕೆ ಬಂದು ತಿಂಗಳೊಂದು ಕಳೆದರೂ ಹೇಳುಕೊಳ್ಳುವಂತಹ ಚಳಿಯೇನೂ ಇರಲಿಲ್ಲ. ಒಂದು ದಿನ ಭಾನುವಾರ ಗಣೇಶನೊಂದಿಗೆ ಗಂಗಾಸ್ನಾನಕ್ಕೆ ಹೋದಾಗ "ಪ್ರಯಾಗದಂತಹ ಪುಣ್ಯಕ್ಷೇತ್ರದಲ್ಲಿ ವಾಸಿಸುತ್ತಿದ್ದೇವೆ. ಪ್ರತಿದಿನವೂ ಗಂಗಾಸ್ನಾನ ಮಾಡಬೇಕೆಂದೆನಿಸುತ್ತದೆ" ಎಂದು ಹೇಳಿದ. ನಾನು ಉಪಹಾಸಪೂರ್ವಕವಾಗಿ ನಗೆಯಾಡಿದ್ದನ್ನು ಕಂಡು ಪ್ರತಿದಿನವೂ ಗಂಗಾಸ್ನಾನ ಮಾಡಬಹುದು ಎಂಬುವುದನ್ನು ಅನೇಕ ಯುಕ್ತಿಗಳಿಂದ ಸಮರ್ಥಿಸಿದ. ಆತ ಹೇಳಿದ್ದು ಬಾಯಿಮಾತಿಗಾದರೂ ಗಂಗಾಸ್ನಾನವನ್ನು ಸಾಧ್ಯವಾದಷ್ಟು ದಿನ ಮಾಡಬೇಕು ಎಂದೆನಿಸಿತು. ಆದ್ದರಿಂದಲೇ "ಯಾವಾಗಲೂ

ಒಳ್ಳೆಯ ಮಾತುಗಳನ್ನೇ ಆಡುತ್ತಿರಬೇಕು" ಎಂದು ಹಿರಿಯರು ಹೇಳುವುದಿರಬಹುದು. ಮರುದಿನದಿಂದಲೇ ಪ್ರತಿದಿನ ಬೆಳಗ್ಗೆ ಎಂಟು ಗಂಟೆಯ ಸುಮಾರಿಗೆ ಗಂಗಾಸ್ನಾನವನ್ನು ಮಾಡಲಾರಂಭಿಸಿದೆ.

ನಾವು ಪ್ರಯಾಗಕ್ಕೆ ಬಂದು ಸುಮಾರು ಒಂದೂವರೆ ತಿಂಗಳುಗಳು ಕಳೆದಾಗ ಉತ್ತರಾದಿ ಮಠದ ಮುಖ್ಯಸ್ಥರಾದ ರಾಘವೇಂದ್ರ ಆಚಾರ್ ಅವರ ದಾಯಾದಿಯೊಬ್ಬರು ನಿಧನರಾದರು. ಶಾರೀರಿಕವಾಗಿ ಅನೇಕ ತೊಂದರೆಗಳನ್ನು ಅನುಭವಿಸುತ್ತಿದ್ದ ಅವರು ನಮ್ಮೊಂದಿಗೆ ಅನೇಕ ಬಾರಿ ಮಾತನಾಡಿದ್ದರು. ಅವರ ಶಾರೀರಿಕ ಅಸ್ವಾಸ್ಥ್ಯವನ್ನು ಅರಿತು ಮರಣವನ್ನು ಊಹಿಸಿದ್ದ ರಾಘವೇಂದ್ರ ಆಚಾರ್ಯರ ಕುಟುಂಬದವರಿಗೆ ಮರಣದಿಂದ ದುಃಖವಾಗಿತ್ತೇ ಹೊರತು ಆಘಾತವಾಗಿರಲಿಲ್ಲ. ಇದಾದ ನಾಲ್ಕು ದಿನಗಳ ನಂತರ ಎಂದಿನಂತೆ ಗಂಗಾಸ್ನಾನಕ್ಕೆ ತೆರಳುತ್ತಿದ್ದ ನನ್ನನ್ನು ಕಂಡ ರಾಘವೇಂದ್ರ ಆಚಾರ್ಯರು, ಉತ್ತರಾದಿ ಮಠದ ದೇವಾಲಯದ ಪೂಜೆ ಮಾಡುವಂತೆ ಪ್ರಾರ್ಥಿಸಿದರು. ಮೊದಲೇ ಹೇಳಿದಂತೆ ರಾಘವೇಂದ್ರ ಆಚಾರ್ಯರು ಶೀಘ್ರಕೋಪಿಗಳಾದರೂ ಅನುಕಂಪಯುಕ್ತ ಮನಸ್ಸುಳ್ಳವರು. ನಮಗೆ ಸುಮ್ಮನೆ ತೊಂದರೆ ಕೊಡಬಾರದು ಎಂದು ನಾಲ್ಕು ದಿನ ಹೇಗೋ ಸುಮ್ಮನಿದ್ದರು. ಸೂತಕದ ದಿನಗಳಲ್ಲಿ ದೇವಾಲಯದ ಪೂಜೆ ನಡೆಯಲೇಬೇಕೆಂಬ ಕಟ್ಟುಕಟ್ಟಳೆಯೂ ಇರಲಿಲ್ಲ. ಮಂಗಳವಾರದ ದಿನದಂದು ಹನುಮಂತನಿಗೆ ಪೂಜೆ-ನೈವೇದ್ಯಗಳನ್ನು ಮಾಡದಿದ್ದರೆ ರಾಘವೇಂದ್ರ ಆಚಾರ್ಯರಿಗೆ ಸಮಾಧಾನವಾಗುತ್ತಿರಲಿಲ್ಲ. ಮಡಿ ಪ್ರಧಾನವಾಗಿರುವ ಉತ್ತರಾದಿ ಮಠದಲ್ಲಿ ದೇವಾವಲಯದ ಬಾವಿಯ ತಣ್ಣೀರಿನಲ್ಲಿ ಮಿಂದು ಪೂಜೆ ಮಾಡಬೇಕಾಗಿತ್ತು. ಪ್ರತಿದಿನವೂ ನಾನು ಗಂಗಾಸ್ನಾನ ಮಾಡುತ್ತೇನೆ ಎಂದು ಅರಿತಿದ್ದ ರಾಘವೇಂದ್ರ ಆಚಾರ್ಯರು ಪೂಜೆ ಮಾಡಬೇಕು ಎಂದು ಕೊಂಚ ಸಂಕೋಚದಿಂದಲೇ ನನ್ನಲ್ಲಿ ಕೇಳಿಕೊಂಡರು. ಹಾಗೆ ನೋಡಿದರೆ ನನ್ನ ಮಿತ್ರರೆಲ್ಲರೂ ನನಗಿಂತ ಹೆಚ್ಚಾಗಿ ಮಂತ್ರ, ಪೂಜೆ ಮುಂತಾದ ವಿಷಯಗಳಲ್ಲಿ ಜ್ಞಾನವನ್ನು ಹೊಂದಿದ್ದರು. ಆದರೆ ಗಂಗಾಸ್ನಾನದಿಂದಾಗಿ ಹನುಮಂತನ ಪೂಜೆ ಮಾಡುವ ಭಾಗ್ಯ ನನಗೆ ದೊರಕಿತ್ತು. "ನಿಮಗೆ ಉತ್ತರಭಾರತ ವಾಸ ಹೊಸತು. ಹೀಗಾಗಿ ಸ್ವೆಟರ್ ಧರಿಸದೇ ಮನೆಯಿಂದ ಹೊರಸರಿಯಬಾರದು" ಎಂದು ಕಟ್ಟಪ್ಪಣೆ ಮಾಡಿದ್ದ ರಾಘವೇಂದ್ರ ಆಚಾರ್ಯರು ನಾನು ಸ್ವೆಟರ್ ಧರಿಸದೇ ತಿರುಗಾಡುವುದನ್ನು ಕಂಡು ಕರೆದು ಬುದ್ಧಿ ಹೇಳಿದ್ದರು. ಆದರಿಂದು ಅವರೇ ತಣ್ಣೀರಿನಲ್ಲಿ ಸ್ನಾನ ಮಾಡಿ ಪೂಜೆ ಮಾಡುವಂತೆ ಆದೇಶಿಸಿದರು. ಇದಕ್ಕೆ ಆಂಜನೇಯಭಕ್ತಿ ಕಾರಣವಾಗಿತ್ತೇ ಹೊರತು ನನ್ನ ಮೇಲಿನ ಕಾಳಜಿಯ

ಕೊರತೆಯಲ್ಲ. ಚಳಿಯಿಂದಾಗುವ ದುಷ್ಪರಿಣಾಮಗಳಿಂದ ಆಂಜನೇಯ ನನ್ನನ್ನು ರಕ್ಷಿಸುತ್ತಾನೆ ಎಂಬ ದೃಢವಿಶ್ವಾಸ ಅವರಿಗಿತ್ತು. ನೈವೇದ್ಯಕ್ಕೆ ಕಲ್ಲಿದ್ದಲಿನ ಒಲೆಯಲ್ಲಿ ಅನ್ನ ಮಾಡಬೇಕಾಗಿತ್ತು. ನಿರ್ಮಾಲ್ಯ ತೆಗೆದು, ಅಭಿಷೇಕ, ಪುಷ್ಪಾರ್ಚನೆ, ನೈವೇದ್ಯಗಳನ್ನು ಮಾಡಿದರೆ ಪೂಜೆ ಮುಗಿಯುತ್ತಿತ್ತು. ಅನ್ನ ಮಾಡಲು ಅವರ ಸಹಾಯಕ ಗುನ್ನು ಒಲೆಯಲ್ಲಿ ಕಲ್ಲಿದ್ದಲನ್ನು ಹಾಕಿ ಬೆಂಕಿ ಹಾಕಿಡುತ್ತಿದ್ದ. ಅಲ್ಲದೇ ರಾಘವೇಂದ್ರ ಆಚಾರ್ಯರು ಹೊರಗೆ ನಿಂತು ಸಣ್ಣ ಸಣ್ಣ ವಿಷಯಗಳಲ್ಲೂ ಮಾರ್ಗದರ್ಶನವನ್ನು ನೀಡುತ್ತಿದ್ದರು. ನೈವೇದ್ಯದ ಪ್ರಸಾದ ನಮಗೆಲ್ಲರಿಗೂ ಮಧ್ಯಾಹ್ನ ಊಟಕ್ಕಾಗುವಷ್ಟಿರುತ್ತಿತ್ತು.

ಹೀಗೆ ನಾಲ್ಕು ದಿನಗಳ ಕಾಲ ಪೂಜೆ ನಡೆಸಿದೆ. ಅವರ ಅಶೌಚನಿವೃತ್ತಿಗೆ ಇನ್ನೂ **೩** ದಿನಗಳಿದ್ದರೂ ನಾವು ಮಥುರೆಗೆ ಹೊರಟದ್ದರಿಂದ ಪೂಜೆಯನ್ನು ಮುಂದುವರೆಸಲು ಸಾಧ್ಯವಾಗಲಿಲ್ಲ. ಡಿಸೆಂಬರ್ ೨೨ ರ ಶುಕ್ರವಾರ ರೈಲನ್ನು ಹತ್ತಿ ಮಥುರೆಗೆ ಹೊರಟೆವು. ರಾತ್ರೆಯ ಚಳಿ ರೈಲಿನಲ್ಲಿ ಬಾಧಿಸುತ್ತಿತ್ತು. ತಲೆಗೆ ಟೋಪಿ, ಮೈಗೆ ಜರ್ಕಿನ್, ಕಾಲಿಗೆ ಶಾಲನ್ನು ಹೊದ್ದುಕೊಂಡು ಹೇಗೋ ನಿದ್ದೆಗೆ ಜಾರಿದೆ. ರಾತ್ರೆ ೧೧.೩೦ ಕ್ಕೆ ಹೊರಟ ರೈಲು ಬೆಳಗಿನಜಾವ ೯.೩೦ ಕ್ಕೆ ಮಥುರೆ ತಲುಪಿತು. ತಕ್ಷಣ ಒಂದು ಲಾಡ್ಜ್ ನಲ್ಲಿ ರೂಮ್ ಮಾಡಿ ಸ್ನಾನ-ತಿಂಡಿಗಳನ್ನು ಪೂರೈಸಿದೆವು. ನಾವು ಮಥುರೆಗೆ ಹೋಗುವಾಗ ಪ್ರಯಾಗಕ್ಕೆ ವಾಪಾಸ್ಸಾಗುವ ಟಿಕೆಟ್ ಬುಕ್ ಮಾಡಿರಲಿಲ್ಲ. ಆದ್ದರಿಂದ ೧೧ ಗಂಟೆ ಆಗುವುದನ್ನೇ ಕಾಯುತ್ತಾ ಕುಳಿತು ಸೂಪರ್ ತತ್ಕಾಲ್ ಆ್ಯಪ್ ನ ಸಹಾಯದಿಂದ ತತ್ಕಾಲ್ ಟಿಕೆಟ್ ಬುಕ್ ಮಾಡಿದೆವು. ತತ್ಕಾಲ್ ಟಿಕೆಟ್ ಎಂದರೆ ರೈಲು ಹೊರಡುವ ಹಿಂದಿನ ದಿನ ೧೧ ಗಂಟೆಗೆ ಬುಕ್ ಮಾಡಬಹುದಾದಂತಹ ಟಿಕೆಟ್. ೧೧ ಗಂಟೆಗೆ ಬುಕ್ಕಿಂಗ್ ಆರಂಭವಾದರೆ ಎರಡೇ ನಿಮಿಷಗಳಲ್ಲಿ ಟಿಕೆಟ್ ಗಳೆಲ್ಲಾ ಖಾಲಿಯಾಗುತ್ತವೆ. ಆದ್ದರಿಂದ ತತ್ಕಾಲ್ ಟಿಕೆಟ್ ಸಿಕ್ಕಿತೆಂದರೆ ಮಹತ್ಸಾಧನೆಯೇ ಸರಿ. ಹಿಂದಿರುಗಿ ಹೋಗುವ ಟಿಕೆಟ್ ಸಿಗಲೇಬೇಕೆಂಬ ಕಾರಣಕ್ಕಾಗಿ ರವಿಶಂಕರ ತನ್ನ ಅನುಭವ, ಕೌಶಲಗಳನ್ನು ಸಮಗ್ರವಾಗಿ ಬಳಸಿ ಟಿಕೆಟ್ ಪಡೆಯುವಲ್ಲಿ ಸಫಲನಾಗಿದ್ದ. ಟಿಕೆಟ್ ಮಾಡಿದ ನಂತರ ಆಟೋವೊಂದರಲ್ಲಿ ಮಥುರಾದ ಪ್ರೇಕ್ಷಣೀಯ ಸ್ಥಳಗಳಾದ ನಂದಗೋಕುಲ, ನಂದಭವನ, ಮಧುವನ, ಮಾಖನ್ ಚೋರ್ ಗಲ್ಲಿ, ಶ್ರೀಕೃಷ್ಣಜನ್ಮಸ್ಥಾನಗಳ ದರ್ಶನವನ್ನು ಪಡೆದೆವು. ಶ್ರೀಕೃಷ್ಣ ಜನ್ಮಸ್ಥಾನ ಮಂದಿರ ಬೃಹತ್ತಾಗಿ ವಿಶಾಲವಾಗಿತ್ತು. ಮೇಲ್ಭಾಗದ ಛಾವಣಿಯಲ್ಲಿ ರಮಣೀಯವಾದ ಚಿತ್ರಗಳನ್ನು ಚಿತ್ರಿಸಿದ್ದು ವಿಶೇಷ. ಆದರೆ ಈ ಭವನದ ಸಮೀಪದಲ್ಲಿದ್ದ ಭವ್ಯ ಮಸೀದಿಯೊಂದು ಮಂದಿರದ ಯಾವುದೇ

ಭಾಗದಲ್ಲಿ ನಿಂತು ನೋಡಿದರೂ ಕಾಣುತ್ತಿತ್ತು. ಉಳಿದ ಸ್ಥಳಗಳಲ್ಲಿ ಹೇಳುವಂತಹ ವಿಶೇಷತೆಯೇನೂ ಕಾಣಲಿಲ್ಲ. ಮುಂದೆ ಬಿರ್ಲಾ ಮಂದಿರದಲ್ಲಿ ಸಮಗ್ರ ಭಗವದ್ಗೀತೆಯನ್ನು ಸ್ತಂಭವೊಂದರಲ್ಲಿ ಕೆತ್ತಿದ್ದನ್ನು ಕಂಡೆವು. ಬಿರ್ಲಾ ಪರಿವಾರದವರು ಸುಮಾರು ೫೦ ವರ್ಷಗಳ ಹಿಂದೆ ಈ ದೇವಾಲಯವನ್ನು ನಿರ್ಮಿಸಿದ್ದರು.

ಮಥುರಾದಿಂದ ೧೨ ಕಿಮೀ ದೂರದಲ್ಲಿರುವ ಬೃಂದಾವನದಲ್ಲಿ ನಮ್ಮ ವಿದ್ಯಾಪೀಠದಲ್ಲಿ ಹಿಂದಿ ಅಧ್ಯಾಪಕರಾಗಿದ್ದ ರಾಜೇಶ್ ಕುಮಾರ್ ಶುಕ್ಲ ವಾಸವಾಗಿದ್ದರು. ಅವರಿಗೆ ಪರ್ಮನೆಂಟ್ ಉದ್ಯೋಗ ದೊರೆತು ಬೃಂದಾವನಕ್ಕೆ ವರ್ಗಾವಣೆಯಾಗಿತ್ತು. ೪ ಗಂಟೆಯ ಸುಮಾರಿಗೆ ಬೃಂದಾವನವನ್ನು ತಲುಪಿದ ತಕ್ಷಣ ರಾಜೇಶ್ ಕುಮಾರ್ ಶುಕ್ಲ ಅವರನ್ನು ಭೇಟಿಯಾದೆವು. ನಾನು ಬೃಂದಾವನದ ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸುತ್ತೇನೆ. ನಮ್ಮ ಮನೆಯಲ್ಲಿ ಊಟ ಮಾಡಿ ಹೋಗಬೇಕು ಎಂದು ಹೇಳಿದರು. ಅವರು ಹೇಳಿದಂತೆ ಅವರೊಂದಿಗೆ ರಂಗನಾಥಮಂದಿರ, ಬಾಂಕೀ ಬಿಹಾರಿ ಮಂದಿರಗಳ ದರ್ಶನವನ್ನು ಮಾಡಿ ಪ್ರೇಮಭವನಕ್ಕೆ ತೆರಳಿದೆವು. ಅದಾಗಲೇ ನಾವು ಹೋಗಿದ್ದ ಆಟೋರಿಕ್ಷಾದ ಚಾಲಕ ನನ್ನ ಸಮಯಾವಧಿ ಮುಗಿದಿದೆ, ನಾನು ಮಥುರೆಗೆ ವಾಪಾಸಾಗುತ್ತೇನೆ. ಎಂದು ತಲೆ ತಿನ್ನುತ್ತಿದ್ದ. ಆದ್ದರಿಂದ ಆತನಿಗೆ ಬಾಡಿಗೆ ಹಣವನ್ನು ಕೊಟ್ಟು ಪ್ರೇಮಮಂದಿರದೊಳಗೆ ಹೊಕ್ಕೆವು. ಪ್ರೇಮ ಮಂದಿರ ಅತ್ಯಂತ ಸುಂದರವಾದ ಎರಡಂತಸ್ತಿನ ಅಮೃತಶಿಲೆಯ ಮಂದಿರ. ಮಂದಿರದಲ್ಲಿ ರಾಧಾಕೃಷ್ಣರ ಪೂಜೆ ನಡೆಯುತ್ತದೆ. ವಿವಿಧ ವರ್ಣಗಳ ದೀಪಗಳಿಂದ ಅಲಂಕೃತವಾಗಿದ್ದ ಮಂದಿರ ಸುಂದರವಾಗಿ ಶೋಭಿಸುತ್ತಿತ್ತು. ಮಂದಿರದ ಸುತ್ತಲೂ ಶ್ರೀಕೃಷ್ಣನ ಬಾಲಲೀಲೆಗಳನ್ನು ಬಿಂಬಿಸುವ ಪ್ರತಿಕೃತಿಗಳನ್ನು ಇರಿಸಲಾಗಿತ್ತು. ಗೋವರ್ಧನೋದ್ಧಾರ, ರಾಸಲೀಲೆ ಮುಂತಾದುವುಗಳ ಪ್ರತಿಕೃತಿಗಳನ್ನು ಕಣ್ತುಂಬಿಕೊಂಡೆವು. ಅಲ್ಲಿಂದ ಅಂಗ್ರೇಜಿ ಮಂದಿರಕ್ಕೆ ತೆರಳಿದೆವು. ಎನ್. ಆರ್. ಐ ಗಳು ನಿರ್ಮಿಸಿದ ಇಸ್ಕಾನ್ ದೇವಾಲಯವೇ ಅಂಗ್ರೇಜಿ ಮಂದಿರ ಎಂದು ತಿಳಿದಾಗ ದೇವಾಲಯದ ಹೆಸರನ್ನು ಕೇಳಿದಾಕ್ಷಣ ಹುಟ್ಟಿದ ಕುತೂಹಲ ತಣಿಯಿತು. ಮಂದಿರದಲ್ಲಿ ದರ್ಶನ ಮಾಡಿದ ನಂತರ ರಾಜೇಶ್ ಕುಮಾರ್ ಶುಕ್ಲ ಅವರ ಮನೆಗೆ ಹೋಗಲು ಇ-ರಿಕ್ಷಾ ಒಂದನ್ನು ಹತ್ತಿದೆವು. ರಿಕ್ಷಾ ಇಲೆಕ್ಟ್ರಿಕ್ ನದ್ದಾದರೂ ಅದರ ಹೆಡ್ ಲೈಟ್ ಗೆ ಇಲೆಕ್ಟ್ರಿಕ್ ಕನೆಕ್ಷನ್ ಇಲ್ಲ ಎಂಬ ವಿಷಯ ಬೀದಿದೀಪಗಳಿಲ್ಲದ ರಸ್ತೆಯಲ್ಲಿ ಬೆಳಕಿಗೆ ಬಂದಿತ್ತು. ತದನಂತರ ನಮ್ಮ ಮೊಬೈಲ್ ನ ಫ್ಲಾಶ್ ಲೈಟ್ ನಲ್ಲೇ ಅರ್ಧ ಕಿಮೀ ದೂರವನ್ನು ತಲುಪಿದೆವು. ಶೃಂಗೇರಿಯಲ್ಲಿ ಅವರ ಅತಿಥಿ ಸತ್ಕಾರದ ಬಗೆಯನ್ನು ಕಂಡಡದ್ದರಿಂದ ಮಧ್ಯಾಹ್ನದ ಊಟದ ನಂತರ ಏನನ್ನೂ

ತಿಂದಿರಲಿಲ್ಲ. ಅವರೊಂದಿಗೆ ಸ್ವಲ್ಪ ಹರಟೆ ಹೊಡೆದು ಅವರು ಬಡಿಸಿದ ಪೂರಿ, ಸಬ್ಜಿ, ರಾಯಿತಗಳನ್ನು ತಿಂದು ಶೇರ್ ಆಟೋವೊಂದರಲ್ಲಿ ಮಥುರಾದ ಲಾಡ್ಜ್ ಗೆ ಹಿಂದಿರುಗಿದೆವು.

ಮರುದಿನ ಬೆಳಗ್ಗೆ ಲಾಡ್ಜ್ ನ ಅವಧಿ ೨೪ ಗಂಟೆ ಮುಗಿಯುವುದರೊಳಗೇ ಹೊರಡುವುದೆಂದು ತೀರ್ಮಾನವಾಗಿತ್ತು. ೧ ನಿಮಿಷ ತಡವಾದರೂ ಒಂದು ದಿನದ ಬಾಡಿಗೆಯನ್ನು ಹೆಚ್ಚುವರಿಯಾಗಿ ಕೊಡಬೇಕಾಗಬಹುದು ಎಂಬ ಎಚ್ಚರಿಕೆಯಿಂದ ೯.೩೦ ರ ಸುಮಾರಿಗೆ ಆಗ್ರಾಕ್ಕೆ ಹೊರಟೆವು. ಮಥುರಾದಲ್ಲೇ ಬೆಳಗಿನ ತಿಂಡಿಯನ್ನು ಮುಗಿಸಿ ಮಂಗಲಾ ಲಕ್ಷದ್ವೀಪ ಎಕ್ಸ್ ಪ್ರೆಸ್ ನ ಮೂಲಕ ಆಗ್ರಾಕ್ಕೆ ಬಂದಿಳಿದೆವು. ಆಗ್ರಾಕ್ಕೆ ಬಂದಾಗಲೇ ಗಂಟೆ ೧೨.೩೦ ದಾಟಿತ್ತು. ಆಗ್ರಾದ ತಿರುಗಾಟಕ್ಕೆ ಆಗ್ರಾ ಡೆವಲಪ್ ಮೆಂಟ್ ಕಾರ್ಪೊರೇಷನ್ ನ ಟಾಕ್ಸಿಯೊಂದನ್ನು ಬುಕ್ ಮಾಡಿದೆವು. ಮೊದಲಿಗೆ ಆಗ್ರಾದ ಕೋಟೆಯನ್ನು ನೋಡಿ ಎಂದು ಡ್ರೈವರ್ ಸೂಚಿಸಿದ. ಕ್ರಿಸ್ ಮಸ್ ರಜೆ ಇದ್ದುದರಿಂದ ದೆಲ್ಲಿಯ ಜನರೆಲ್ಲಾ ಆಗ್ರಾಕ್ಕೆ ಬಂದಿದ್ದರು. ಬಹಳ ರಶ್ ಇದ್ದರೂ ಕೋಟೆಯನ್ನು ಸಂಪೂರ್ಣವಾಗಿ ನೋಡಿದೆವು. ಮೊಘಲರ ಕಾಲದಲ್ಲಿ ಕ್ರಮೇಣವಾಗಿ ಕಟ್ಟಲಾದ ಸುಮಾರು ಎರಡುವರೆ ಚದರಕಿಮೀ ವ್ಯಾಪ್ತಿಯಲ್ಲಿರುವ ಕೋಟೆಯನ್ನು ನೋಡಿ ಆಶ್ಚರ್ಯವಾಯಿತು. ನನ್ನಂತಹ ಸಾಮಾನ್ಯ ಜನ ಆಗ್ರಾದಲ್ಲಿ ತಾಜ್ ಮಹಲ್ ಮಾತ್ರ ಇರುವುದು ಎಂಬ ಭ್ರಮೆಯಲ್ಲಿದ್ದರಾರೆ. ಅಲ್ಲದೇ ಈ ಕೋಟೆಯನ್ನು ನೋಡದೆಯೇ ಹಿಂದಿರುಗುತ್ತಾರೆ ಎಂದು ಬೇಸರವೂ ಆಯಿತು. ಕೋಟೆಯನ್ನು ನೋಡಿ ಊಟ ಮಾಡಿ ತಾಜ್ ಮಹಲ್ ಬಳಿಗೆ ಹೋದರೆ ಟಿಕೆಟ್ ಕೌಂಟರ್ ನ ಬಳಿಯಲ್ಲೇ ಸುಮಾರು ನೂರು ಮೀಟರ್ ಉದ್ದದ ಸರತಿ ಸಾಲಿತ್ತು. ಒಬ್ಬರು ಸರಾಸರಿ ೩ ಟಿಕೆಟ್ ಗಳನ್ನಾದರೂ ಕೊಳ್ಳುವುದರಿಂದ ಸುಮಾರು ಅರ್ಧ ಕಿಮೀ ಜಾಗದಲ್ಲಿ ಪ್ರವಾಸಿಗರು ಜಮಾಯಿಸಿದ್ದರು. ಇಂತಹ ಜನಜಂಗುಳಿಯಲ್ಲಿ ತಾಜ್ ಮಹಲ್ ನ ಒಳಹೊಕ್ಕರೆ ಜಾತ್ರೆಗೆ ಹೋದಂತೆ ನೂಕುನುಗ್ಗಲಿನಲ್ಲಿ ಹೋಗಿ ವಾಪಾಸ್ಸಾಗಬೇಕಾಗಬಹುದು ಎಂದು ಯೋಚಿಸಿ ಬೇಸರದಿಂದ ಹೊರನಡೆದೆವು. ಅಲ್ಲಿಂದ ಕಾರ್ ಡ್ರೈವರ್ ನಮ್ಮನ್ನು ಸರ್ಕಾರದ ಹ್ಯಾಂಡ್ ಲೂಮ್ ಮಳಿಗೆಯೊಂದಕ್ಕೆ ಕೊಂಡೊಯ್ದ. ಅಂಗಡಿಯಲ್ಲಿ ಸುಮಾರು ಅರ್ಧ ಗಂಟೆಯಷ್ಟು ಹೊತ್ತು ಬಿದಿರಿನ ಸೀರೆ, ಬಾಳೆದಿಂಡಿನ ಸೀರೆ, ಅಮೃತಶಿಲೆಯ ಮಾಡೆಲ್ ಎಂದು ಅಡ್ವಟೈಸ್ ಮೆಂಟ್ ಕೇಳಿದೆವು. ಟಾಕ್ಸಿಗೆ ಬಾಡಿಗೆ ಹಣ ಕೊಟ್ಟು ಅಡ್ವಟೈಸ್ ಮೆಂಟ್ ಕೇಳಿಸಿಕೊಳ್ಳುತ್ತಿದ್ದ ನಮ್ಮ ಬಗೆಗೆ ನಮಗೇ ಅಸಮಾಧಾನವುಂಟಾಯಿತು.

ಇಷ್ಟರಲ್ಲಾಗಲೇ ೬ ಗಂಟೆಯಾದುದರಿಂದ ಟಾಕ್ಸಿಯ ಸಮಯಾವಧಿ ಮುಗಿದಿತ್ತು. ಡ್ರೈವರ್ ನಮ್ಮನ್ನು ರೈಲ್ವೇ ಸ್ಟೇಶನ್ ಗೆ ತಂದು ಇಳಿಸಿದ್ದ.

೬ ಗಂಟೆಗೆ ರೈಲ್ವೇ ಸ್ಟೇಶನ್ ಹೊಕ್ಕ ನಮಗೆ ೯.೩೦ ಕ್ಕೆ ರೈಲು ಬರುವ ತನಕ ಬಿಡುವಿತ್ತು. ರೈಲ್ವೇ ವೈಫೈ ಕನೆಕ್ಟ್ ಆದುದರಿಂದ ಸಮಯ ಕಳೆಯುವುದೇನೂ ಕಷ್ಟವಾಗಲಿಲ್ಲ. ವ್ಯರ್ಥವಾಗಿ ಫೇಸ್ ಬುಕ್ ನೋಡುತ್ತಾ ರಾಜಕೀಯ ಕೆಸರೆರೆಚಾಟಗಳಿಗೆ ಮರುಗುವುದರ ಬದಲಾಗಿ ಜನವರಿ ೭ ರಂದು ಬೆಳ್ತಂಗಡಿಯಲ್ಲಿ ನಡೆಯುವ ನನ್ನ ಅಷ್ಟಾವಧಾನದ ಆಮಂತ್ರಣವನ್ನು ಎಲ್ಲರಿಗೂ ಕಳುಹಿಸೋಣ ಎಂದು ಯೋಚಿಸಿದೆ. ಅಂತೆಯೇ ಬ್ರಾಡ್ ಕಾಸ್ಟ್ ಒಂದನ್ನು ರಚಿಸಿ ಎಲ್ಲರಿಗೂ ಸಂದೇಶಗಳನ್ನು ಕಳುಹಿಸಲಾರಂಭಿಸಿದೆ. ಇದರಿಂದಾಗಿ ನಾನು ಊರಿಗೆ ಬರುತ್ತಿದ್ದೇನೆ ಎಂಬುದನ್ನು ತಿಳಿದ ನನ್ನ ದೂರಸಂಬಂಧಿ, ಸೋದರಮಾವ, ಸುಳ್ಯದ ಸ್ನೇಹ ಶಿಕ್ಷಣಸಂಸ್ಥೆಯ ಸ್ಥಾಪಕಸದಸ್ಯ ಚಂದ್ರಶೇಖರ ದಾಮ್ಲೆ ತಮ್ಮ ಸಂಸ್ಥೆಯಲ್ಲಿ ಜನವರಿ ೧೪ ಕ್ಕೆ ಅವಧಾನ ಮಾಡಬಹುದೇ ಎಂದು ಕೇಳಿದರು. ಬೆಳ್ತಂಗಡಿಯ ಅವಧಾನ ಮುಗಿಸಿ ಹಿಂದಿರುಗಲು ೧೨ ನೇ ತಾರೀಕಿಗೆ ರಿಸರ್ವೇಶನ್ ಮಾಡಿಸಿದ್ದೆ. ಸುಳ್ಯದಲ್ಲೂ ಅವಧಾನ ಮಾಡುವುದಾದರೆ ೧೫ ನೇ ತಾರೀಕಿನ ಲಕ್ನೋ ಯಶವಂತಪುರ ಎಕ್ಸ್ ಪ್ರೆಸ್ ಗೆ ಟಿಕೆಟ್ ಬುಕ್ ಮಾಡಿದೆ. ನನ್ನ ಭಾಗ್ಯವೋ ಎಂಬಂತೆ ಆರ್.ಎ.ಸಿ ಟಿಕೆಟ್ ದೊರಕಿತು. ತದನಂತರ ೧೪ ನೇ ತಾರೀಕಿನಂದು ಅವಧಾನವನ್ನು ನಡೆಸಬಹುದು ಎಂದು ಚಂದ್ರಶೇಖರ ದಾಮ್ಲೆ ಅವರಿಗೆ ತಿಳಿಸಿ, ಅವರು ಸಮ್ಮತಿಯನ್ನು ಸೂಚಿಸಿದ ನಂತರ ೧೨ ನೇ ತಾರೀಕಿನ ಟಿಕೆಟ್ ಕ್ಯಾನ್ಸಲ್ ಮಾಡಿಸಿದೆ. ಚಂದ್ರಶೇಖರ ದಾಮ್ಲೆಯವರೂ ತಕ್ಷಣ ಕಾರ್ಯಪ್ರವೃತ್ತರಾಗಿ ಅರ್ಧಗಂಟೆಯೊಳಗೆ ೪-೫ ಪೃಚ್ಛಕರನ್ನು ನಿಶ್ಚಯಿಸಿದರು. ಶಿಕ್ಷಣ ಸಂಸ್ಥೆಯೊಂದರ ಮುಖ್ಯಸ್ಥರಾಗಿ ಇಂತಹ ಅನೇಕ ಕಾರ್ಯಕ್ರಮಗಳನ್ನು ನಿರ್ವಹಿಸಿದ ಅನುಭವವಿರುವ ಚಂದ್ರಶೇಖರ ದಾಮ್ಲೆಯವರ ಚಾಕಚಕ್ಯತೆಯ ಕುರಿತಾದ ಕಲ್ಪನೆಯಿತ್ತು. ಅಷ್ಟಾವಧಾನದ ಆಯೋಜನೆಯ ಸಮಯದಲ್ಲಿ ಅವರೊಂದಿಗಿನ ಮಾತುಕತೆ ಅವರ ಅಗಾಧ ಸಾಮರ್ಥ್ಯದ ಪ್ರತ್ಯಕ್ಷ ದರ್ಶನವನ್ನು ಮಾಡಿಸಿತ್ತು. ಹೀಗೆ ಆಗ್ರಾದಲ್ಲಿ ತಾಜ್ ಮಹಲನ್ನು ನೋಡದಿದ್ದರೂ ಅನೇಕ ಕಾರ್ಯಗಳನ್ನು ರೈಲ್ವೇ ಸ್ಟೇಶನ್ ನ ವೈಫೈ ಮೂಲಕ ಸಾಧಿಸಿದ್ದಕ್ಕೆ ಸಮಾಧಾನವಾಯಿತು. ಸುಮಾರು ಅರ್ಧ ಗಂಟೆ ತಡವಾಗಿ ಬಂದ ರೈಲನ್ನು ಹತ್ತಿ ಪ್ರಯಾಗದೆಡೆಗೆ ಹೊರಟೆವು.

ಮುಂಜಾನೆ ೬ ಗಂಟೆಯ ಹೊತ್ತಿಗೆ ಅಲಹಾಬಾದ್ ಜಂಕ್ಷನ್ ರೈಲು ನಿಲ್ದಾಣವನ್ನು ತಲುಪಿತು. ಅಲ್ಲಿಂದ ಶೇರ್ ಆಟೋದ ಮೂಲಕ ದಾರಾಗಂಜ್

ತಲುಪಿಯೂ ಆಯಿತು. ರೈಲಿನಲ್ಲಿ ಸ್ವಲ್ಪ ಪ್ರಮಾಣದ ಚಳಿ ಇದ್ದುದರಿಂದ ನಿದ್ದೆಯ ಮಂಪರು ಹಾಗೆಯೇ ಉಳಿದಿತ್ತು. ರೂಮಿಗೆ ಹೋಗಿ ಪಲಾವ್ ಮಾಡೋಣ ಎಂದು ಗಣೇಶ ಸೂಚಿಸಿದ. ಹೀಗಾಗಿ ತರಕಾರಿ ಅಂಗಡಿಯೊಂದರಿಂದ ಕ್ಯಾರೆಟ್ ಕೊಂಡುಕೊಂಡೆ. ತರಕಾರಿ ಅಂಗಡಿಯಲ್ಲಿ ಸುಮಾರು ೩ ಕೆ.ಜಿ ಕ್ಯಾರೆಟ್ ಮಾರಾಟಕ್ಕಿತ್ತು. ನಮಗಂತೂ ಅರ್ಧ ಕೆ.ಜಿ ಕ್ಯಾರೆಟ್ ಸಾಕಾಗಿತ್ತು. ತರಕಾರಿ ಅಂಗಡಿಯ ಹೆಂಗಸು ಪ್ಲಾಸ್ಟಿಕ್ ಕವರೊಂದರಲ್ಲಿ ಕ್ಯಾರೆಟ್ ಗಳನ್ನು ಇಟ್ಟುಕೊಂಡಿದ್ದಳು. ಆಗ್ರಾದಿಂದ ನೇರವಾಗಿ ಅಂಗಡಿಗೆ ಬಂದಿದ್ದರಿಂದ ನನ್ನ ಬಳಿ ಪ್ರತಿದಿನವೂ ತರಕಾರಿ ಒಯ್ಯುವ ಕೈಚೀಲ ಇರಲಿಲ್ಲ. ಅಲ್ಲದೇ ಅದಾಗಲೇ ಕೊಂಡಿದ್ದ ಹಾಲು ಹಾಗೂ ಸಕ್ಕರೆ ಕೂಡಾ ನನ್ನ ಕೈಯಲ್ಲಿತ್ತು. ಅಂಗಡಿಯಾಕೆ ನಾನು ಕೊಂಡ ಅರ್ಧ ಕೆ.ಜಿ ಕ್ಯಾರೆಟನ್ನು ಬೇರೊಂದು ಪ್ಲಾಸ್ಟಿಕ್ ಕವರ್ ನಲ್ಲಿ ತುಂಬಿಸಿ ಉಳಿದ ಕ್ಯಾರೆಟ್ ಗಳ ಪಕ್ಕಕ್ಕೇ ಇಟ್ಟಿದ್ದಳು. ಕ್ಯಾರೆಟ್ ನ ಹಣವನ್ನು ಕೊಟ್ಟ ನಂತರ ಹಾಲು, ಸಕ್ಕರೆ ಹಾಗೂ ನಾನು ಕೊಂಡಿದ್ದ ಕ್ಯಾರೆಟ್ ಗಳನ್ನು ಎಡಕೈಯಲ್ಲಿ ಹಿಡಿದುಕೊಂಡೆ. ನಿದ್ದೆಯ ಮಂಪರಿನಲ್ಲೋ, ಅಚಾತುರ್ಯದಿಂದಲೋ ಪಕ್ಕದಲ್ಲೇ ಇದ್ದ ಇನ್ನೊಂದು ಕ್ಯಾರೆಟ್ ಚೀಲವನ್ನೂ ಎತ್ತಿಕೊಂಡು ರೂಮಿನೆಡೆಗೆ ನಡೆಯುತ್ತಿದ್ದೆ. ವ್ಯಾಪಾರದಲ್ಲಿ ಮಗ್ನಳಾಗಿದ್ದ ಅಂಗಡಿಯಾಕೆ ಅದನ್ನು ಗಮನಿಸಲಿಲ್ಲ. ತರಕಾರಿ ಮಾರುವ ಮಹಿಳೆಗೂ ನನಗೂ ಇದರ ಬಗ್ಗೆ ಪರಿವೆ ಇಲ್ಲದಿದ್ದರೂ ಸರ್ವಜ್ಞನಾದ ಭಗವಂತ ಇದನ್ನು ಗಮನಿಸಿದ್ದ. ನಮ್ಮ ರೂಮಿನ ಬಳಿ ಡ್ರೈನೇಜ್ ನ ಕಾಲುವೆಯಿತ್ತು. ಅದರಿಂದ ಡ್ರೈನೇಜ್ ಹೊರಗೆ ಬರುತ್ತಿತ್ತು. ತೆಳುವಾಗಿ ಹರಡಿದ್ದ ಡ್ರೈನೇಜ್ ನ ಮೇಲೆ ಕಾಲಿಡದೇ ಮುಂದುವರೆಯುವುದು ಅಸಾಧ್ಯವಾಗಿತ್ತು. ಎರಡು ತಿಂಗಳುಗಳಿಂದ ಇಲ್ಲಿ ವಾಸವಾಗಿರುವುದರಿಂದ ಚಪ್ಪಲಿಯ ತಳಭಾಗಕ್ಕೆ ಮಾತ್ರ ಸ್ವಲ್ಪ ಮಟ್ಟಿಗೆ ಅಂಟಿಕೊಳ್ಳುವ ಡ್ರೈನೇಜ್ ನ ಮೇಲೆ ಕಾಲಿಟ್ಟು ನಡೆಯುವುದು ಅಭ್ಯಾಸವಾಗಿತ್ತು. ಯಾವುದೇ ಅಸಹ್ಯ ಭಾವವಿಲ್ಲದೇ ಡ್ರೈನೇಜ್ ನ ಮೇಲೆ ಕಾಲಿಟ್ಟೆ. ಕಾಲು ಸರಕ್ಕನೆ ಜಾರಿತು. ಕೈಗಳನ್ನು ನೆಲಕ್ಕೆ ಊರೋಣವೆಂದರೆ ಎರಡು ಕೈಗಳಲ್ಲೂ ವಸ್ತುಗಳಿದ್ದವು. ಇಂತಹ ಸಂದರ್ಭದಲ್ಲಿ ಏನಾಗುತ್ತಿದೆ ಎಂದು ಅರಿಯುವುದೇ ಕಷ್ಟ. ಜಾರುತ್ತಿದ್ದೇನೆ ಎಂಬ ಜ್ಞಾನ ಉಂಟಾಗುವ ಮೊದಲೇ ನನ್ನದಲ್ಲದ ಕ್ಯಾರೆಟ್ ಚೀಲವನ್ನು ಆಕಾಶದತ್ತ ತೂರಿ ಬಲಗೈಯಿಂದ ನೆಲವನ್ನೂರಿದ್ದೆ. ಭಗವಂತ ಈ ಕ್ಯಾರೆಟ್ ನ ಚೀಲ ನಿನ್ನದಲ್ಲ ಎಂದು ಸೂಚಿಸಿದ್ದರೂ ನನ್ನ ಮಂದ ಬುದ್ಧಿಗೆ ಇದರ ಅರಿವಾಗಲಿಲ್ಲ. ಭಾಗ್ಯವೋ ಎಂಬಂತೆ ಕ್ಯಾರೆಟ್ ಚೀಲ ನೆಲಕ್ಕೆ ಬಿದ್ದಿದ್ದರೂ ಕ್ಯಾರೆಟ್ ಮಾತ್ರ ನೆಲಕ್ಕೆ ಬಿದ್ದಿರಲಿಲ್ಲ. ಅಲ್ಲದೇ ಕ್ಯಾರೆಟ್ ನ ಚೀಲ ಪ್ರಯಾಗದಲ್ಲಿ ಶುದ್ಧ ಜಾಗ ಎಂದು ಹೇಳಬಹುದಾದ ಸ್ಥಳದಲ್ಲಿ ಬಿದ್ದಿತ್ತು. ಅಲ್ಲದೇ

ಕ್ಯಾರೆಟ್ ಪ್ಲಾಸ್ಟಿಕ್ ಚೀಲದಿಂದ ಚೆಲ್ಲಿರಲಿಲ್ಲ. 'ನಾನು ಬಿದ್ದದ್ದನ್ನು ಯಾರೂ ಕಾಣಲಿಲ್ಲ' ಎಂದು ಸಂತಸಪಡುತ್ತಾ ಪ್ಯಾಂಟ್ ಕೊಡವಿಕೊಂಡು ಕ್ಯಾರೆಟ್ ನ ಚೀಲವನ್ನೆತ್ತಿಕೊಂಡು ರೂಮಿನತ್ತ ನಡೆದೆ. ನನ್ನನ್ನು ನೋಡಿದ ಗೆಳೆಯ ಗಣೇಶ "ಎಂತ ಆಗಿದೆ ನಿಂಗೆ?" ಎಂದು ಕೇಳಿದ. ನಾನು ಬಿದ್ದ ವಿಚಾರ ಪ್ಯಾಂಟ್ ಗೆ ತಾಗಿದ್ದ ಮಣ್ಣನ್ನು ನೋಡಿ ತಿಳಿಯಿತೇನೋ ಎಂದುಕೊಂಡು ಮಣ್ಣನ್ನು ಮರೆಮಾಚುತ್ತಾ "ಯಾಕೆ?" ಎಂದು ಪ್ರಶ್ನಿಸಿದೆ. "ಇಷ್ಟೊಂದು ಕ್ಯಾರೆಟ್ ಯಾಕೆ ತಂದದ್ದು? ಪುಕ್ಕಟೆ ಕೊಟ್ರಾ?" ಎಂದು ಕೇಳಿದಾಗ ತಪ್ಪಿನ ಅರಿವಾಗಿತ್ತು. ಕ್ಯಾರೆಟ್ ನ ಚೀಲವನ್ನು ಪುನಃ ಕೊಂಡೊಯ್ದು ಅಂಗಡಿಯಾಕೆಗೆ ನೀಡಿ ಕ್ಷಮೆ ಕೇಳಿದೆ. ಬೆಳಗಿನ ಜಾವವೇ ನಷ್ಟವಾಯಿತು ಎಂದು ಪೆಚ್ಚುಮೋರೆ ಹಾಕಿಕೊಂಡಿದ್ದ ಅಂಗಡಿಯಾಕೆ ನಾನು ಕ್ಯಾರೆಟ್ ಮರಳಿಸಿದ್ದನ್ನು ಕಂಡು ಮಂದಹಾಸವನ್ನು ಬೀರಿ ಮೆಚ್ಚುಗೆಯ ಮಾತುಗಳನ್ನಾಡಿದಳು.

ಆ ದಿನ ಕ್ಷೌರ ಮಾಡಿಸಿ, ಗಂಗಾಸ್ನಾನ ತಿಂಡಿಗಳಾಗುವಷ್ಟರಲ್ಲಿ ಗಂಟೆ ೧೦.೩೦ ಆಗಿತ್ತು. ವಿಶ್ರಾಂತಿ ತೆಗೆದುಕೊಳ್ಳುವ ಮನಸ್ಸಾದರೂ ಈ ಹೊತ್ತಿನಲ್ಲಿ ನಿದ್ದೆ ಮಾಡಿದರೆ ಇಡೀ ದಿನದ ಸಮಯಸಾರಿಣಿಯಲ್ಲಿ ವ್ಯತ್ಯಾಸವಾಗಿ ಕ್ರಿಸ್ ಮಸ್ ನ ಪುಣ್ಯ ದಿನ ವ್ಯರ್ಥವಾಗುತ್ತದೆ ಎಂದೆನಿಸಿತು. ಆದ್ದರಿಂದ ಅಧ್ಯಯನಕ್ಕಾಗಿ ಸಂಸ್ಕೃತಗಂಗಾಕ್ಕೆ ತೆರಳಿದೆ. ಸಂಸ್ಕೃತಗಂಗಾ ನಮ್ಮ ರೂಮಿನಿಂದ ಎರಡು ನಿಮಿಷಗಳ ಅಂತರದಲ್ಲಿರುವ ಸಂಸ್ಕೃತದ ಸ್ಪರ್ಧಾತ್ಮಕ ಪರೀಕ್ಷೆಗಳ ಕೋಚಿಂಗ್ ಸೆಂಟರ್. ಅಲ್ಲಿನ ಸಣ್ಣ ಗ್ರಂಥಾಲಯದಲ್ಲಿ ನನ್ನ ಅತಿಸಣ್ಣ ಅಧ್ಯಯನಕ್ಕೆ ಸ್ವಲ್ಪ ಹೆಚ್ಚು ಅನ್ನುವಷ್ಟೇ ಪುಸ್ತಕಗಳಿದ್ದವು. ಅಲ್ಲದೇ ಅಧ್ಯಯನಕ್ಕೆ ಪ್ರಶಸ್ತವಾದ ಸ್ಥಾನವೂ ಇದ್ದುದರಿಂದ ಪ್ರತಿದಿನವೂ ಗಂಗೆಯಲ್ಲಿ ಸ್ನಾನ ಸಂಸ್ಕೃತ ಗಂಗೆಯಲ್ಲಿ ಅಧ್ಯಯನ ಯಾವುದೇ ತೊಂದರೆಗಳಿಲ್ಲದೇ ನಡೆಯುತ್ತಿತ್ತು.

ಕೆ ಸೆಟ್ ಪರೀಕ್ಷೆಯನ್ನು ಬರೆಯುವುದಕ್ಕೋಸ್ಕರ ರವಿಶಂಕರ ಡಿಸೆಂಬರ್ ೨೭ ರಂದು ಬೆಂಗಳೂರಿಗೆ ಹೊರಟಿದ್ದ. ಅದೇ ದಿನ ಉತ್ತರಾದಿಮಠದ ಮುಖ್ಯಸ್ಥ ರಾಘವೇಂದ್ರ ಆಚಾರ್ ಅವರ ತಮ್ಮನ ವೈಕುಂಠ ಸಮಾರಾಧನೆಯಿತ್ತು. ರಾತ್ರೆ ಊಟಕ್ಕೆ ನಮ್ಮೆಲ್ಲರನ್ನೂ ರಾಘವೇಂದ್ರ ಆಚಾರ್ ಕರೆದಿದ್ದರು. ಮುರಳಿಕೃಷ್ಣ, ಗಣೇಶ ಹಾಗೂ ಗಣೇಶಪ್ರಸಾದರಿಗೆ ವೈಕುಂಠಸಮಾರಾಧನೆಯ ಊಟ ಮಾಡುವ ಮನಸ್ಸಾಗಲಿಲ್ಲ. ನನಗೂ ರವಿಶಂಕರನಿಗೂ ಇಲ್ಲಿನ ವೈಕುಂಠಸಮಾರಾಧನೆಯಲ್ಲಿ ಊಟ ಹೇಗಿರುತ್ತದೆ ಎಂದು ತಿಳಿಯುವ ಕುತೂಹಲ ಹಾಗೂ ಉಣ್ಣುವ ಉತ್ಸಾಹವಿತ್ತು. ನಾವು ಸ್ವಲ್ಪ ಮಟ್ಟಿಗೆ ಧರ್ಮಾಚಾರಗಳನ್ನು ಬಿಟ್ಟವರೆಂದರೂ ತಪ್ಪಲ್ಲ. ಹಾಗೆಂದು ಎಲ್ಲವನ್ನೂ ಬಿಟ್ಟ ಆಚಾರಭ್ರಷ್ಟರಂತೂ

ಆಗಿರಲಿಲ್ಲ. ಹೀಗಾಗಿ ನಾವಿಬ್ಬರೂ ರಾತ್ರೆಯ ಊಟಕ್ಕೆ ಅವರ ಮನೆಗೆ ತೆರಳಿದೆವು. ನಮ್ಮಲ್ಲಿರುವಂತೆ ಎಲ್ಲ ಅತಿಥಿಗಳೂ ಬಂದ ನಂತರ ಪಂಕ್ತಿ ಹಾಕಿ ಊಟ ಹಾಕುವ ಪದ್ಧತಿ ಇಲ್ಲಿಲ್ಲ. ಬದಲಾಗಿ ಅತಿಥಿಗಳು ಬಂದಂತೆ ಅವರಿಗೆ ಊಟವನ್ನು ಬಡಿಸುವುದು ಇಲ್ಲಿನ ಕ್ರಮವಾಗಿತ್ತು. ರವಿಶಂಕರನಿಗೆ ಬೆಂಗಳೂರಿಗೆ ಹೋಗಬೇಕಾದ್ದರಿಂದ ನಾವು ಸ್ವಲ್ಪ ಬೇಗವೇ ಊಟಕ್ಕೆ ಹೋಗಬೇಕಾಯಿತು. ಆದ್ದರಿಂದ ಊಟಕ್ಕೆ ಮೊದಲನೆಯವರಾಗಿ ತೆರಳಿದವರೇ ನಾವಾಗಿದ್ದೆವು. ಕಚೋರಿ, ಸಬ್ಜಿ, ಬೂಂದಿ ರಾಯಿತ, ಸಿಹಿ ಚಟ್ನಿಗಳ ಊಟ ಮಾಡಿ ರವಿಶಂಕರ ಬೆಂಗಳೂರಿಗೆ ತೆರಳಿದ.

೦೭-೦೧-೨೦೧೮ ರಂದು ಬೆಳ್ತಂಗಡಿಯಲ್ಲಿ ನನ್ನ ಅಷ್ಟಾವಧಾನವಿದ್ದುದರಿಂದ ಊರಿಗೆ ಹೋಗುವುದು ನಿಶ್ಚಯವಾಗಿತ್ತು. ಊರಿಗೆ ಹೋಗುವಾಗ ಒಯ್ಯಲು ಬೇಕಾದ ಗಂಗಾಜಲ ಹಾಗೂ ಸಂಗಮತೀರ್ಥಗಳನ್ನು ಸಂಗ್ರಹಿಸಲು ಶನಿವಾರ ಹಾಗೂ ಭಾನುವಾರಗಳನ್ನು ಬಳಸಿಕೊಂಡೆ. ಮಾಘಮೇಳಕ್ಕಾಗಿ ಸರ್ವವಿಧದ ಸಿದ್ಧತೆಗಳೂ ಸಂಗಮದ ದಡದಲ್ಲಿ ನಡೆಯುತ್ತಿದ್ದವು. ಗಂಗಾ ಯಮುನಾ ನದಿಗಳ ಇಕ್ಕೆಲಗಳಲ್ಲೂ ಸಾವಿರಕ್ಕೂ ಹೆಚ್ಚಿನ ಸಂಖ್ಯೆಯ ಕುಟೀರಗಳು ರಾರಾಜಿಸುತ್ತಿದ್ದವು. ಹೀಗೆ ಸಂಗಮದ ಸಮೀಪ ಕುಟೀರಗಳನ್ನು ನಿರ್ಮಿಸಿದ ಭಕ್ತರು ಮಾಘ ಮಾಸದಲ್ಲಿ ಪ್ರತಿದಿನವೂ ಸಂಗಮಸ್ನಾನ ಮಾಡಿ ಜಪ ತಪಾದಿಗಳಲ್ಲಿ ತೊಡಗಿರುತ್ತಾರೆ. ನಮ್ಮ ರೂಮಿನಿಂದ ಸಂಗಮಕ್ಕೆ ಹೋಗುವ ದಾರಿಯಲ್ಲಿ ಅನೇಕ ಮಂದಿ ಸಾಧು ಸಂತರ ದರ್ಶನವಾಯಿತು. ಮಾಘಮಾಸ ಆರಂಭವಾಗದಿದ್ದರೂ ಸಂಗಮದ ತೀರದಲ್ಲಿ ಅನೇಕ ಜನ ಮಿಂದು ಧನ್ಯರಾಗುತ್ತಿದ್ದರು. ಮೈಕ್ ಗಳಲ್ಲಿ ಭಜನೆಗಳು ಮೊಳಗುತ್ತಿದ್ದವು. ಸಂಗಮದತ್ತ ಏಕಾಕಿಯಾಗಿ ನಡೆಯುತ್ತಿದ್ದ ನನಗೆ ೧೦ನೇ ಶತಮಾನದ ಕಾಲದಲ್ಲಿದ್ದೇನೋ ಎಂಬ ಭಾವವುಂಟಾಯಿತು. ವಿಶೇಷವೆಂದರೆ ಸಂಗಮ ತೀರದಲ್ಲಿ ಓಡಾಡುತ್ತಿದ್ದ ಇ-ರಿಕ್ಷಾ, ಲಾರಿಗಳಾಗಲೀ, ಅಲ್ಲಲ್ಲಿ ನೆಟ್ಟಿದ್ದ ವಿದ್ಯುತ್ ಕಂಬಗಳಾಗಲೀ, ಆಧುನಿಕ ಮಾದರಿಯ ಶೌಚಾಲಯಗಳಾಗಲೀ ನನ್ನ ಭಾವಕ್ಕೆ ಭಂಗವನ್ನುಂಟುಮಾಡಲಿಲ್ಲ. ಟಿ.ವಿಯಲ್ಲಿ ಮಾತ್ರ ಕಂಡಿದ್ದ ನಾಗಾಸಾಧುಗಳ ಪ್ರತ್ಯಕ್ಷ ದರ್ಶನವೂ ಆಯಿತು. ಹೀಗೆ ಬಗೆ ಬಗೆಯ ಅಚ್ಚರಿಗಳನ್ನನುಭವಿಸುತ್ತಾ ಸಂಗಮದ ಪುಣ್ಯತೀರ್ಥದಲ್ಲಿ ಮಿಂದು, ಊರಿಗೆ ಒಯ್ಯಲು ತೀರ್ಥ ಸಂಗ್ರಹಿಸಿ, ಮಾಘಮೇಳದ ಸಮಯದಲ್ಲಿ ಊರಿಗೆ ಹೊರಡುತ್ತಿದ್ದೇನೆ ಎಂಬ ದುಗುಡವನ್ನೂ ಹೊತ್ತು ರೂಮಿಗೆ ಹಿಂದಿರುಗಿದೆ.

ಮೊದಲ ಬಾರಿಗೆ ರೈಲಿನಲ್ಲಿ ದೂರದ ಪ್ರಯಾಣಕ್ಕೆ ಸಿದ್ಧನಾಗಿದ್ದ ನನಗೆ ಹೆದರಿಕೆಯಿರಲಿಲ್ಲವಾದರೂ ಸಂಪೂರ್ಣವಾದ ಧೈರ್ಯವೂ ಇರಲಿಲ್ಲ. ಭಗವಂತನ ಕೃಪೆಯಿಂದ ಇಷ್ಟು ದಿನಗಳವರೆಗೆ ಆರೋಗ್ಯವಂತನಾಗಿದ್ದ ನನ್ನನ್ನು ರೈಲು ಪ್ರಯಾಣದ ವೇಳೆಯಲ್ಲೇನಾದರೂ ಅನಾರೋಗ್ಯ ಬಾಧಿಸಿದರೆ ಏನು ಮಾಡುವುದೆಂಬ ಚಿಂತೆ ಮನಸ್ಸಿನಲ್ಲಿತ್ತು. ಅಲ್ಲದೇ ಪ್ರಯಾಗದಿಂದ ಮುಂಬೈ, ಮುಂಬೈಯಿಂದ ಉಡುಪಿ ಹೀಗೆ ರೈಲನ್ನು ಬದಲಾಯಿಸಬೇಕಾಗಿತ್ತು. ರೈಲುಗಳ ನಡುವಿನ ಅಂತರ ೬ ಗಂಟೆಯಷ್ಟಿದ್ದರೂ ಹಿಮಪಾತದಿಂದಾಗಿ ರೈಲು ಸಂಚಾರದಲ್ಲಿ ವ್ಯತ್ಯಯವಾಗಬಹುದು ಎಂಬ ಭೀತಿಯೂ ಸದಾ ಕಾಡುತ್ತಿತ್ತು. ಜನವರಿ ನಾಲ್ಕನೆಯ ತಾರೀಕು ಗುರುವಾರದಂದು ಮಧ್ಯಾಹ್ನ ೪ ಗಂಟೆಯ ವೇಳೆಗೆ ವಿದ್ಯಾಲಯದಿಂದಲೇ ಅಲಹಾಬಾದ್ ಜಂಕ್ಷನ್ ರೈಲ್ವೇ ಸ್ಟೇಶನ್ ಗೆ ತೆರಳಿದೆ. ಸುಮಾರು ೬ ಲೀಟರ್ ಗಂಗಾಜಲ ಹಾಗೂ ೨ ಲೀಟರ್ ಕುಡಿಯುವ ನೀರು ನನ್ನ ಮುಖ್ಯ ಲಗೇಜ್ ಆಗಿತ್ತು. ನನ್ನ ಪದ್ಧತಿಯಂತೆ ಪ್ರಯಾಣದಲ್ಲಿ ಅತಿ ಕಡಿಮೆ ಲಗೇಜ್ ಹಿಡಿದುಕೊಂಡಿದ್ದೆ. ನನ್ನ ಅದೃಷ್ಟಕ್ಕೆ ಸರಿಯಾದ ಸಮಯಕ್ಕೆ ರೈಲು ಬಂದಿತ್ತು. ರೈಲಿನಲ್ಲಿ ಸಹಪ್ರಯಾಣಿಕರ ಕಿರಿಕಿರಿಯೂ ಹೆಚ್ಚಿರಲಿಲ್ಲ. ಸ್ವಲ್ಪಮಟ್ಟಿನ ಚಳಿಯಿದ್ದರೂ ಅಂತಹ ತೊಂದರೆಯೇನೂ ಆಗಲಿಲ್ಲ. ರೈಲು ದಕ್ಷಿಣ ಭಾರತದತ್ತ ಚಲಿಸುತ್ತಿದ್ದ ಹಾಗೆಯೇ ಮನದೊಳಗಿದ್ದ ಮಂಜಿನ ಭೀತಿ ಮಂಜಿನಂತೆ ಕರಗುತ್ತಿತ್ತು. ರೈಲು ನಿಗದಿತ ಸಮಯಕ್ಕಿಂತ ಒಂದುವರೆ ಗಂಟೆ ತಡವಾಗಿ ಚಲಿಸುತ್ತಿದ್ದರೂ ಎರಡು ರೈಲುಗಳ ನಡುವಿನ ಅಂತರ ೬ ಗಂಟೆಗಳ ಕಾಲ ಇದ್ದುದರಿಂದ ಚಿಂತೆಯಾಗಲಿಲ್ಲ. ಸಹಪಾಠಿ ಗಣೇಶ ಚಪಾತಿ ಮಾಡಿಕೊಟ್ಟದ್ದರಿಂದ ರೈಲಿನಲ್ಲಿ ಊಟಕ್ಕೂ ತೊಂದರೆಯಾಗಲಿಲ್ಲ. ರೈಲು ನಿಗದಿತ ಸಮಯಕ್ಕಿಂತ ಎರಡು ಗಂಟೆ ತಡವಾಗಿ, ೫ ನೇ ತಾರೀಕು ಸಂಜೆ ೭.೦೦ ಗಂಟೆಗೆ ಮುಂಬೈನ ಥಾಣೆ ನಿಲ್ದಾಣವನ್ನು ತಲುಪಿತು.

ತದನಂತರ ಸುಮಾರು ಅರ್ಧ ಗಂಟೆಯಷ್ಟು ಹೊತ್ತು ರೈಲ್ವೇ ವೈಫೈನಲ್ಲಿ ಬ್ರೌಸ್ ಮಾಡಿದೆ. ಸಾಮಾನ್ಯ ಕ್ಯಾಟಗರಿಯ ನಮ್ಮಂತಹವರಿಗೆ ಮೀಸಲಾತಿ ಇಲ್ಲದೇ ಸಿಗುವ ಕೆಲವೇ ಕೆಲವು ಸೌಲಭ್ಯಗಳನ್ನಾದರೂ ಬಳಸಿಕೊಳ್ಳಬೇಕೆಂಬುದು ನನ್ನ ಚಿಂತನೆಯಾಗಿತ್ತು. ನಿಲ್ದಾಣದ ಹೊರವಲಯದಲ್ಲಿದ್ದ ಹೋಟೇಲೊಂದರಲ್ಲಿ ಪುರೀ ತಿಂದು ರಾತ್ರೆಯ ಊಟವನ್ನು ಮುಗಿಸಿದೆ. ಮುಂಬೆನ ಲೋಕಲ್ ರೈಲುಗಳ ಭೀಕರ ಕತೆಗಳನ್ನು ಕೇಳಿದ್ದ ನನಗೆ ಅನೇಕ ಭೀಕರತೆಗಳು ಪ್ರತ್ಯಕ್ಷವಾಗಿ ಕಂಡವು. ರೈಲಿನ ಜನಸಂದಣಿ, ಓಡುತ್ತಿರುವ ರೈಲನ್ನು ಹತ್ತಿ ಇಳಿಯುವ ಜನರನ್ನು ಕಂಡು ಅಚ್ಚರಿಯಾಯಿತು. ೧೦.೩೦ ರಷ್ಟು ಹೊತ್ತಿಗೆ ಮಂಗಳೂರಿನ ರೈಲು ಥಾಣೆ ನಿಲ್ದಾಣಕ್ಕೆ

ಬಂದಿತ್ತು. ರೈಲಿನಲ್ಲಿ ಜನಸಂದಣಿಯಿದ್ದರೂ ನನ್ನ ಟಿಕೆಟ್ ಬುಕ್ ಆಗಿದ್ದರಿಂದ ವೈಯಕ್ತಿಕವಾಗಿ ಅಷ್ಟೇನೂ ತೊಂದರೆಯಾಗಲಿಲ್ಲ. ಆದರೆ ಮಡಗಾಂವ್ ಗೆ ಹೊರಟಿದ್ದ ಯುವಕರ ತಂಡವೊಂದರಿಂದ ಇಡಿಯ ಬೋಗಿಗೇ ತೊಂದರೆಯಾಗುತ್ತಿತ್ತು.

ರೈಲಿನಲ್ಲಿ ಏಕಾಕಿಯಾಗಿ ಪ್ರಯಾಣಿಸುವಾಗ ಇಯರ್ ಫೋನ್ ಹಾಕಿಕೊಂಡು ಹಾಡುಗಳನ್ನು ಕೇಳುವುದು ಹಲವರ ಅಭ್ಯಾಸ. ಆದರೆ ಶಿವಮೊಗ್ಗದ ಸಂಸ್ಕೃತ ಭಾರತೀಯ ಕಾರ್ಯಕರ್ತ ಅ.ನಾ ವಿಜಯೇಂದ್ರರಾವ್ "ಬಸ್ಸು-ರೈಲುಗಳಲ್ಲಿ ಪ್ರಯಾಣಿಸುವಾಗ ಇಯರ್ ಫೋನ್ ಹಾಕಿಕೊಳ್ಳದೇ ಸುತ್ತಲಿನವರ ವ್ಯವಹಾರಗಳನ್ನು ಗಮನಿಸುತ್ತಿರಬೇಕು" ಎಂದು ಹೇಳಿದ್ದರು. ಆದ್ದರಿಂದ ಸಾಮಾನ್ಯವಾಗಿ ಪ್ರಯಾಣದ ಸಮಯದಲ್ಲಿ ಇಯರ್ ಫೋನ್ ಹಾಕದಿರುವುದು ನನ್ನ ಅಭ್ಯಾಸವಾಗಿತ್ತು. ಈ ಪ್ರಯಾಣದಲ್ಲೂ ಇಯರ್ ಫೋನ್ ಗಳನ್ನು ಕಿವಿಗೆ ಸಿಕ್ಕಿಸದೇ ಇದ್ದುದರಿಂದ ಅನೇಕ ವಿಶಿಷ್ಟ ಅನುಭವಗಳಾದವು. ಪ್ರಯಾಗದಿಂದ ಮುಂಬೈಗೆ ಬರುವಾಗ ರೈಲಿನಲ್ಲಿದ್ದ ಸಹಪ್ರಯಾಣಿಕರು ಬಡವರು ಹಾಗೂ ಔಪಚಾರಿಕ ಶಿಕ್ಷಣದಿಂದ ವಂಚಿತರಾದವರಾಗಿದ್ದರು. ಅವರ ಆರ್ಥಿಕ ಸ್ಥಿತಿ ತಕ್ಕಮಟ್ಟಿಗೆ ಚೆನ್ನಾಗಿದ್ದ ಕಾರಣ ಸ್ಲೀಪರ್ ಕೋಚ್ ಹತ್ತಿದ್ದರು. ಸಾಮಾನ್ಯವಾಗಿ ಎಲ್ಲರೂ ತಮ್ಮ ಊಟದ ಬುತ್ತಿಯನ್ನು ಮನೆಯಿಂದಲೇ ತಂದಿದ್ದರು. ಊಟದ ನಂತರ ಬುತ್ತಿ ತೊಳೆದು ಮನೆಯಿಂದ ತಂದ ನೀರನ್ನು ಕುಡಿಯುತ್ತಿದ್ದರು. ಯಾವ ರೀತಿಯ ಪರಿಸರ ಮಾಲಿನ್ಯವೂ ಇವರಿಂದ ಆಗುತ್ತಿರಲಿಲ್ಲ. ರಾತ್ರೆ ೧೦.೩೦ ರ ವೇಳೆಗೆ ರೈಲಿನ ವಾತಾವರಣ ಶಾಂತವಾಗಿತ್ತು. ತರುಣನೊಬ್ಬ ಗಟ್ಟಿಯಾಗಿ ಹರಟುತ್ತಿದ್ದ. ಹಿರಿಯ ಪ್ರಯಾಣಿಕರೊಬ್ಬರು ಗಟ್ಟಿಯಾಗಿ ಮಾತನಾಡುತ್ತಿದ್ದ ಆತನನ್ನು ಕರೆದು "ಎಲ್ಲರೂ ಮಲಗಿದ್ದಾರೆ ಗಲಾಟೆ ಮಾಡಬೇಡ" ಎಂದು ಸೂಚಿಸಿದರು. ತರುಣನೂ ಹೌದೆಬಂತೆ ತಲೆಯಲ್ಲಾಡಿಸಿ ಸುಮ್ಮನಾದ. ಇದು ಮೊದಲನೇ ರೈಲಿನ ಕತೆಯಾದರೆ ಮುಂಬೈನಿಂದ ಮಂಗಳೂರಿನ ಪ್ರಯಾಣದಲ್ಲಿ ಹತ್ತಿದ್ದ ಎರಡನೇ ರೈಲಿನ ಕತೆ ಭಿನ್ನವಾಗಿತ್ತು. ನನ್ನ ಪಕ್ಕದ ಸೀಟಿನಲ್ಲಿ ಪ್ರಯಾಣಿಸುತ್ತಿದ್ದವರೆಲ್ಲ ಶ್ರೀಮಂತ ಕುಟುಂಬದ ಯುವಕ-ಯುವತಿಯರಾಗಿದ್ದರು. ಪ್ರಾಯಶಃ ಪ್ರತಿಷ್ಠಿತ ಕಾಲೇಜುಗಳಿಗೆ ಹೋದವರೆಂಬ ವಿಷಯ ಅವರ ವ್ಯವಹಾರಗಳಿಂದಲೇ ವ್ಯಕ್ತವಾಗುತ್ತಿತ್ತು. ಮುಂಬೈನ ಛತ್ರಪತಿ ಶಿವಾಜಿ ರೈಲುನಿಲ್ದಾಣದಿಂದ ಥಾಣೆ ನಿಲ್ದಾಣಕ್ಕೆ ರೈಲು ಬರುವಷ್ಟರಲ್ಲಿಯೇ ಕರಿದ ತಿಂಡಿಗಳ ಅನೇಕ ಪ್ಯಾಕೆಟ್ ಗಳನ್ನು ಹುರಿದು ಮುಕ್ಕಿದ್ದರು. ಅಲ್ಲದೇ ಸಣ್ಣಸಣ್ಣ ಬಾಟಲಿಗಳಲ್ಲಿ ನೀರು ಕುಡಿದು ಕಿಟಕಿಯಿಂದ ಬಾಟಲಿಗಳನ್ನು ಹೊರಗೆಸೆಯುತ್ತಿದ್ದರು. ಇದರಿಂದಾಗುತ್ತಿದ್ದ ಪರಿಸರ ಮಾಲಿನ್ಯದ ಬಗೆಗಂತೂ ಅವರ

ಪರಿವೆಯಿರಲಿಲ್ಲ. ಅಲ್ಲದೇ ಗಂಟೆ ಹನ್ನೆರಡು ದಾಟಿದ್ದರೂ ಗಟ್ಟಿಯಾಗಿ ಅಟ್ಟಹಾಸಗೈಯುತ್ತಾ ಹರಟುತ್ತಿದ್ದರು. ಯಾರಾದರೂ ಬುದ್ಧಿ ಹೇಳಿದರೆ ಅವರನ್ನೇ ಪರಿಹಾಸ ಮಾಡಿ ನಗುತ್ತಿದ್ದರು. ವಿವಿಧ ವಿಧದ ವಿಲಾಸಗಳನ್ನು ಮುಗಿಸಿ ಮಲಗುವಾಗ ಬೆಳಗಿನ ಜಾವ ೪ ಗಂಟೆಯಾಗಿತ್ತು. ಅವರು ಲೈಟ್ ಆಫ್ ಮಾಡುವಾಗ ನನಗೆ ಎಚ್ಚರವಾದುದರಿಂದ ೪ ಗಂಟೆಯವರೆಗೂ ಇವರ ಆಟ ನಡೆದಿರಬಹುದೆಂದು ಊಹಿಸಿದೆ. ರೈಲು ಬೆಳಗ್ಗೆ ೮.೦೦ ಗಂಟೆಗೆ ಮಡಗಾಂವ್ ತಲುಪಿದಾಗ ೯೦ ಜನ ರೈಲಿನಿಂದ ಇಳಿದರು. ೭೨ ಸೀಟುಗಳಲ್ಲಿ ಕೇವಲ ೧೫ ಜನ ಪ್ರಯಾಣಿಕರಿದ್ದೆವು. ಕರ್ನಾಟಕದ ಜನ ರೈಲು ಪ್ರಯಾಣಕ್ಕೆ ಹಿಂಜರೆಯುತ್ತಾರೆಂಬುದು ಮತ್ತೊಮ್ಮೆ ಸ್ಪಷ್ಟವಾಯಿತು. ೧೨.೩೦ ಕ್ಕೆ ರೈಲು ಉಡುಪಿ ತಲುಪಿತು. ಇಂದ್ರಾಳಿಯ ತನಕ ನಡೆದು ಅಲ್ಲಿಂದ ಬಸ್ ಹಿಡಿದು ಕಾರ್ಕಳದ ಹೋಟೆಲೊಂದರಲ್ಲಿ ಊಟ ಮುಗಿಸಿ ೪ ಗಂಟೆಯ ಸುಮಾರಿಗೆ ಮನೆ ತಲುಪಿದೆ. ಬೇಡವೆಂದರೂ ತಮ್ಮ ಚಂದ್ರಹಾಸ ಆ್ಯಕ್ಸಸ್ ತೆಗೆದುಕೊಂಡು ನನ್ನನ್ನು ಕರೆದೊಯ್ಯಲು ಬಂದಿದ್ದ. ಪ್ರಯಾಗದ ದಾರಾಗಂಜ್ ನಿಂದ ಅಂಡಿಂಜೆಯ ನನ್ನ ಮನೆಯ ತನಕ ಸಾರ್ವಜನಿಕ ಸಾರಿಗೆಯಲ್ಲೇ ಸಂಚರಿಸಬೇಕೆಂಬ ನನ್ನ ಸಂಕಲ್ಪ ಭಂಗವಾಯಿತು. ನನ್ನ ಈ ಸಂಕಲ್ಪದಿಂದ ಮಹತ್ತರವಾದುದೇನೂ ಸಾಧನೆಯಾಗುವುದಿಲ್ಲ ಎಂಬ ತಥ್ಯ ಮನಸ್ಸಿಗೆ ಹೊಳೆದಾಗ ಸಮಾಧಾನವಾಯಿತು.

ಭಾನುವಾರವೇ ನನ್ನ ಅಷ್ಟಾವಧಾನವಿತ್ತು. ಮಿತ್ರನಾದ ಗಣೇಶಕೃಷ್ಣ, ಅಪ್ರಸ್ತುತ ಪ್ರಸಂಗದ ಪೃಚ್ಛಕನಾಗಿದ್ದ ಸುನಿಲನನ್ನು ಕರೆದುಕೊಂಡು ಮನೆಗೆ ಬಂದಿದ್ದ. ಆತನೊಂದಿಗೆ ಆತನ ಕಾರಿನಲ್ಲಿಯೇ ಅವಧಾನಕ್ಕೆ ತೆರಳಿದೆ. ಅವಧಾನ ಯಾವುದೇ ತೊಂದರೆಗಳಿಲ್ಲದೇ ನಡೆಯಿತು. ಮಾರನೆಯ ದಿನ ಶೃಂಗೇರಿಗೆ ಹೋಗಿ ವಿದ್ಯಾಪೀಠದಲ್ಲಿ ಅಧ್ಯಾಪಕರನ್ನೂ ವಿದ್ಯಾರ್ಥಿಗಳನ್ನೂ ಭೇಟಿಯಾಗಿ ಕುಶಲೋಪರಿಗಳನ್ನು ನಡೆಸಿದೆ. ನಮ್ಮ ವಿದ್ಯಾಪೀಠದ ಸಾಹಿತ್ಯ ವಿಭಾಗದ ಪ್ರಾಧ್ಯಾಪಕ ಕೊಂಪೆಲ್ಲಿ ವಿನಯಕುಮಾರ್ ಅವರ ಮನೆಯಲ್ಲಿ ಸೀಮಂತವಿದ್ದುದರಿಂದ ರಾತ್ರೆ ಭರ್ಜರಿ ಊಟವೂ ಆಯಿತು. ಶೃಂಗೇರಿಯಲ್ಲಿ ನನ್ನ ವಿದ್ಯಾವಾರಿಧಿಯ ಮಾರ್ಗದರ್ಶಕರಾದ ಡಾ. ರಾಘವೇಂದ್ರ ಭಟ್ಟರನ್ನು ಕಂಡು ವಿದ್ಯಾವಾರಿಧಿಯ ವಿಷಯದ ಬಗ್ಗೆ ಮಾರ್ಗದರ್ಶನವನ್ನೂ ಪಡೆದುಕೊಂಡೆ. "ಶೃಂಗೇರಿಗೆ ಬಂದರೆ ಮನೆಗೆ ಬಾ ವಾಣೀಗೆ ಪಾರ್ಸೆಲ್ ಇದೆ." ಎಂದು ನನ್ನ ವಿದ್ಯಾವಾರಿಧಿಯ ಸಹಪಾಠಿನಿ ವಾಣೀಯ ತಾಯಿ ತಿಳಿಸಿದ್ದರು. ಹೀಗಾಗಿ ಮಂಗಳವಾರ ಬೆಳಗ್ಗೆ ವಾಣೀಯ ಮನೆಗೆ ತೆರಳಿದೆ. ವಾಣಿಗೋಸ್ಕರ ತಾಯಿ ಮಂಡಕ್ಕಿ ಹುರಿದು ಕೊಟ್ಟಿದ್ದರು. ಮಂಡಕ್ಕಿಯ ಭಾರ ಹೆಚ್ಚಿಲ್ಲದಿದ್ದರೂ ಗಂಟು ಮಾತ್ರ

ದೊಡ್ಡದಾಗಿತ್ತು. ಮದುವೆಯಾಗಿ ಮಗಳು ಹಿಮಾಚಲಕ್ಕೆ ತೆರಳಿದ್ದರೂ , ಪ್ರಯಾಗದಲ್ಲಿ ಮಂಡಕ್ಕಿಯ ಅಭಾವ ಇರದಿದ್ದರೂ ಮಗಳಿಗಾಗಿ ಮಂಡಕ್ಕಿಯನ್ನು ಕೊಟ್ಟು ಕಳುಹಿಸಿದ್ದರು. ತಾಯಿಗೆ ಮಕ್ಕಳ ಮೇಲಿರುವ ವಾತ್ಸಲ್ಯದ ಸಾಕ್ಷಾತ್ಕಾರವನ್ನು ಪುನಃ ಪಡೆದುಕೊಂಡೆ. ಬೇರೆ ಯಾವುದೇ ಮುಖ್ಯ ಕೆಲಸಗಳಿಲ್ಲದ ಕಾರಣ ಅದೇ ದಿನ ಮನೆಗೆ ಹಿಂದಿರುಗಿದೆ. ಎರಡು ದಿನಗಳ ನಂತರ "ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಉಪನ್ಯಾಸಕ ಹುದ್ದೆಗೆ ಜನವರಿ ೨೨ ರಂದು ಪ್ರವೇಶ ಪರೀಕ್ಷೆಯಿದೆ. ಅದರ ಹಾಲ್ ಟಿಕೆಟ್ ಪೋಸ್ಟ್ ನಲ್ಲಿ ಬಂದಿದೆ." ಎಂದು ಗೆಳೆಯ ಪ್ರಶಾಂತ ಫೋನ್ ಮಾಡಿ ತಿಳಿಸಿದ. ಆದರೆ ೧೫ ನೇ ತಾರೀಕಿಗೆ ಪ್ರಯಾಗಕ್ಕೆ ಮರಳುವ ರಿಸರ್ವೇಶನ್ ಮಾಡಿಸಿದ್ದೆ. ಪರೀಕ್ಷೆಯಲ್ಲಿ ಅರ್ಹತೆಯನ್ನು ಗಳಿಸಬಲ್ಲೆ ಎಂಬ ಧೈರ್ಯವಿತ್ತಾದರೂ ವಿಶ್ವವಿದ್ಯಾಲಯದ ಬಗೆಗಿನ ಗಾಳಿಸುದ್ದಿಯನ್ನು ಕೇಳಿದ್ದರಿಂದ ಹುದ್ದೆಗೆ ಆಯ್ಕೆಯಾಗುವ ನಂಬಿಕೆಯಂತೂ ಎಳ್ಳಷ್ಟೂ ಇರಲಿಲ್ಲ. ಆದರೂ ಇಂತಹ ಮಹತ್ತ್ವದ ವಿಚಾರಗಳಲ್ಲಿ ಗುರುಹಿರಿಯರ ಸಲಹೆಯನ್ನು ಪಡೆಯದೇ ನನ್ನ ಅಲ್ಪಬುದ್ಧಿಗೆ ತೋಚಿದ್ದನ್ನು ಮಾಡುವುದು ಸರಿಯಲ್ಲ ಎಂದೆನಿಸಿತು. ನನ್ನ ಮಾರ್ಗದರ್ಶಕ ಡಾ.ರಾಘವೇಂದ್ರ ಭಟ್ಟರಿಗೂ ನನ್ನ ತಂದೆಯವರಿಗೂ ಈ ವಿಷಯವನ್ನು ತಿಳಿಸಿದೆ. "ಪರೀಕ್ಷೆ ಬರೆಯುವುದರಿಂದ ಲಾಭವಾಗದಿದ್ದರೂ ನಷ್ಟವಂತೂ ಖಂಡಿತ ಆಗಲಾರದು. ಆದ್ದರಿಂದ ಪರೀಕ್ಷೆ ಬರೆಯುವುದು ಸೂಕ್ತ" ಎಂಬ ಅಭಿಪ್ರಾಯ ಇಬ್ಬರಿಂದಲೂ ವ್ಯಕ್ತವಾಗಿತ್ತು. ಪ್ರಯಾಗದ ತರಗತಿಗಳ ಸಂಯೋಜಕ ಪ್ರೊ. ಲಲಿತಕುಮಾರ್ ತ್ರಿಪಾಠೀ "ಪರೀಕ್ಷೆಯನ್ನು ಮುಗಿಸಿ ಬಂದರೆ ತೊಂದರೆಯಿಲ್ಲ." ಎಂದು ತಿಳಿಸಿದರು. ೧೦ ದಿನಗಳ ಮೊದಲು ಬುಕ್ ಮಾಡಿದರೆ ರೈಲ್ವೇ ಟಿಕೆಟ್ ದೊರೆಯುವುದು ಅನಿಶ್ಚಿತವಾದುದರಿಂದ ಪರೀಕ್ಷೆಯನ್ನು ಬರೆಯದೇ ಹೋಗುವುದೇ ಯೋಗ್ಯ ಎಂಬುವುದು ನನ್ನ ನಿಲುವಾಗಿತ್ತು. ಆದರೆ ಪರೀಕ್ಷೆಯನ್ನು ಬರೆಯದೇ ಹೋದರೆ "ಮುಂದೊಂದು ದಿನ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದಲ್ಲಿ ಪರೀಕ್ಷೆ ಬರೆಯದಿದ್ದರೆ ಆಯ್ಕೆಯಾಗುತ್ತಿದ್ದೇನೋ" ಎಂಬ ಕೊರಗು ಇಡಿಯ ಜೀವನದಲ್ಲಿ ಕಾಡಬಹುದು. ಅದಕ್ಕಿಂತ ಪರೀಕ್ಷೆ ಬರೆಯುವುದೇ ಲೇಸು. ಟಿಕೆಟ್ ಸಿಗದಿದ್ದರೆ ಎರಡು ದಿನಗಳ ಮಟ್ಟಿಗೆ ರೈಲಿನಲ್ಲಿ ಕಷ್ಟಪಡಬೇಕಾಗಬಹುದಷ್ಟೇ ಎಂದೆನಿಸಿತು. ಆದ್ದರಿಂದ ೨೨ ತಾರೀಕಿಗೆ ಟಿಕೆಟ್ ಬುಕ್ ಮಾಡಿದೆ. ಅದೃಷ್ಟಕ್ಕೆ ೧೦ ದಿನಗಳ ಮೊದಲು ರೈಲ್ವೇ ಟಿಕೆಟ್ ಬುಕ್ ಮಾಡಿದ್ದರೂ ೫ ದಿನಗಳಲ್ಲಿ ಆರ್. ಎ. ಸಿ ಆಗಿ ಚಾರ್ಟ್ ಪ್ರಿಪೇರ್ ಆಗುವಾಗ ಕನ್ಫರ್ಮ್ ಆಗಿತ್ತು. ಪೂರ್ವನಿಶ್ಚಯದಂತೆ ಜನವರಿ ೧೪ ರಂದು ಸುಳ್ಯದ ಸ್ನೇಹ ಶಾಲೆಯಲ್ಲಿ ಅಷ್ಟಾವಧಾನ ಯಶಸ್ವಿಯಾಗಿ ನಡೆಯಿತು. ಮರುದಿನದಿಂದ ಮೂರು

ದಿನಗಳ ಕಾಲ ಶೃಂಗೇರಿಯ ವಿದ್ಯಾಪೀಠದಲ್ಲಿ ಮಹಾಭಾರತದ ಬಗೆಗೆ ವರ್ಕ್ ಶಾಪ್ ನಡೆಯಿತು. ವರ್ಕ್ ಶಾಪ್ ನ ಸಂಯೋಜಕರಾದ ನನ್ನ ಮಾರ್ಗದರ್ಶಕ ಡಾ. ರಾಘವೇಂದ್ರ ಭಟ್ ಹಾಗೂ ವ್ಯಾಕರಣ ವಿಭಾಗದ ಪ್ರಾಧ್ಯಾಪಕ ಡಾ.ಚಂದ್ರಶೇಖರ ಭಟ್ ಕಾರ್ಯಶಾಲೆಯಲ್ಲಿ ಭಾಗವಹಿಸುವ ಅವಕಾಶವನ್ನಿತ್ತರು. ಮೂರು ದಿನಗಳ ಕಾರ್ಯಶಾಲೆಯ ನಂತರ ಮನೆಗೆ ಹಿಂದಿರುಗಿ, ೨೨ ನೆಯ ತಾರೀಕಿನಂದು ಪರೀಕ್ಷೆ ಇದ್ದುದರಿಂದ ೨೧ ನೆಯ ತಾರೀಕು ರಾತ್ರೆಯ ಬಸ್ಸಿಗೆ ಬೆಂಗಳೂರಿಗೆ ಹೊರಟೆ. ನನ್ನ ಲಗೇಜ್ ವಿಶೇಷವಾಗಿರದಿದ್ದರೂ ವಾಣಿಯ ತಾಯಿ ಕೊಟ್ಟ ಮಂಡಕ್ಕಿ ಗಂಟು ಹಾಗೂ ಗೆಳೆಯ ಗಣೇಶನ ಒಂದಷ್ಟು ವಸ್ತುಗಳಿದ್ದವು. ಪ್ರತಿವರ್ಷದಂತೆ ಶಿರಾಡಿ ಘಾಟಿ ಬಂದ್ ಆಗಿದ್ದರಿಂದ ಚಾರ್ಮಾಡಿ ಘಾಟಿಯ ಮೂಲಕ ಬಸ್ ಸಂಚರಿಸಿದರೂ ಬೆಳಗಿನ ಜಾವ ೫.೩೦ ಕ್ಕೆ ಯಶವಂತಪುರ ತಲುಪಿತ್ತು. ರೈಲ್ವೇ ನಿಲ್ದಾಣದ  ಲಗೇಜ್ ರೂಮಿನಲ್ಲಿ ನನ್ನ ಲಗೇಜುಗಳನ್ನಿಟ್ಟು ಹನುಮಂತನಗರದಲ್ಲಿನ ದೊಡ್ಡಪ್ಪನ ಮನೆಗೆ ತೆರಳಿದೆ. ಅಲ್ಲಿಂದ ಮಧ್ಯಾಹ್ನ ೨ ಗಂಟೆಗೆ ಚಾಮರಾಜಪೇಟೆಯಲ್ಲಿನ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದಲ್ಲಿ ಪರೀಕ್ಷೆ ಬರೆದು ೫.೦೦ ಗಂಟೆಯ ಸುಮಾರಿಗೆ ಶ್ರೀರಾಂಪುರದಲ್ಲಿನ ದೊಡ್ಡಮ್ಮನ ಮಗಳು ಅಶ್ವಿನಿ ಅಕ್ಕನ ಮನೆ ತಲುಪಿದೆ. 'ಆಹಾರೇ ವ್ಯವಹಾರೇ ಚ ತ್ಯಕ್ತಲಜ್ಜಃ ಸುಖೀ ಭವೇತ್' ಎಂಬ ಮಾತನ್ನು ಸದಾ ಅನುಸರಿಸುವ ನಾನು ರೈಲು ಪ್ರಯಾಣದಲ್ಲಿ ತಿನ್ನುವುದಕ್ಕೆ ಚಪಾತಿಗಳನ್ನು ಮಾಡಿಕೊಡಲು ಅಶ್ವಿನಿ ಅಕ್ಕನಿಗೆ ಸೂಚಿಸಿದ್ದೆ. ಅಶ್ವಿನಿ ಅಕ್ಕ ಹಾಗೂ ಅವಳ ಅತ್ತೆ ದಕ್ಷಿಣ ಕನ್ನಡದವರಾಗಿದ್ದರಿಂದ ಅವರ ಮನೆಯಲ್ಲಿ ಚಟ್ನಿಪುಡಿ ಇರುವುದಿಲ್ಲ ಎಂಬ ಕಲ್ಪನೆಯಿತ್ತು. ಹೀಗಾಗಿ ಬೆಳಗ್ಗೆಯೇ ದೊಡ್ಡಮ್ಮಲ್ಲಿ ಕೇಳಿ ಚಟ್ನಿಪುಡಿಯನ್ನು ಚೀಲಕ್ಕೆ ತುಂಬಿಸಿಕೊಂಡಿದ್ದೆ. ರಾತ್ರೆ ಊಟ ಮಾಡಿ ಮೆಟ್ರೋದ ಮೂಲಕ ರೈಲು ನಿಲ್ದಾಣವನ್ನು ತಲುಪಿ ಲಗೇಜ್ ತೆಗೆದುಕೊಂಡು ರೈಲನ್ನೇರಿದೆ. ಯಾವುದೇ ತೊಂದರೆಗಳಲ್ಲದೇ ಎರಡು ದಿನಗಳ ನಂತರ ಮಧ್ಯಾಹ್ನ ೨ ಗಂಟೆಗೆ ರೈಲು ಅಲಹಾಬಾದ್ ಜಂಕ್ಷನ್ ರೈಲುನಿಲ್ದಾಣವನ್ನು ತಲುಪಿತು. ನಿಲ್ದಾಣದಿಂದ ಶೇರ್ ಆಟೋ ಮೂಲಕ ದಾರಾಗಂಜ್ ತಲುಪಿದೆ. ಮಾಘ ಮೇಳದ ಕಾರಣ ಊಹೆಗೂ ನಿಲುಕದಷ್ಟು ಟ್ರಾಫಿಕ್ ಇತ್ತು. ೩ ಗಂಟೆಗೆ ರೂಮಿಗೆ ತಲುಪಿ ಗಂಗಾಸ್ನಾನವನ್ನು ಮಾಡಿ ನನಗಾಗಿ ಉಳಿಸಿಟ್ಟಿದ್ದ ಪಲಾವ್ ತಿಂದಾಗ ಮಿತ್ರರೂ ವಿದ್ಯಾಪೀಠದಿಂದ ಮರಳಿದರು. ವಾಣಿಯ ತಾಯಿ ನಮಗಾಗಿ ಕೊಟ್ಟಿದ್ದ ಮಂಡಕ್ಕಿ ಮೆಲ್ಲುತ್ತಾ ಪರಸ್ಪರ ವಿಚಾರ ವಿನಿಮಯ ನಡೆಯಿತು. ಆಶ್ಚರ್ಯವೆಂದರೆ  ಎರಡೇ ದಿನಗಳಲ್ಲಿ ನಾನು ಬೆಂಗಳೂರಿನಲ್ಲಿ ಬರೆದಿದ್ದ ಪರೀಕ್ಷೆಯ ಫಲಿತಾಂಶ ಪ್ರಕಟವಾಗಿತ್ತು. ೪೦ ಪರೀಕ್ಷಾರ್ಥಿಗಳಲ್ಲಿ ನಾನು

ಮೂರನೇ ಸ್ಥಾನದಲ್ಲಿದ್ದೆ. ವಾರದ ನಂತರ ಹುದ್ದೆಗೆ ಮೀಸಲಾತಿಯನ್ನು ಜಾರಿಗೊಳಿಸಿ ನೇಮಕಾತಿ ನಡೆಸಿದ ಸುತ್ತೋಲೆಯೂ ಪ್ರಕಟವಾಯಿತು. ಪರೀಕ್ಷೆಯಲ್ಲಿ ಉನ್ನತ ಶ್ರೇಣಿಯನ್ನು ಗಳಿಸಿದ್ದಕ್ಕಾಗಿ ಸಂದರ್ಶನವನ್ನು ನಡೆಸಿ ನನ್ನ ಸಮಯ, ಹಣ, ಶ್ರಮಗಳನ್ನು ವ್ಯರ್ಥಗೊಳಿಸಲಿಲ್ಲ ಎಂದು ಸಂತಸವಾಯಿತು.

ಮರುದಿನದಿಂದ ಎಂದಿನಂತೆ ದಿನಚರಿ ಆರಂಭವಾಯಿತು. ಜನವರಿ ೨೬ ರ ಗಣತಂತ್ರ ದಿವಸವನ್ನು ಅತ್ಯಂತ ವಿಶಿಷ್ಟವಾಗಿ ಕಳೆದೆ. ಗಣರಾಜ್ಯೋತ್ಸವ ಶುಕ್ರವಾರ ಆಗಿದ್ದರಿಂದ ಸತತವಾಗಿ ಮೂರು ದಿನಗಳ ಕಾಲ ರಜೆಯಿತ್ತು. ಆದ್ದರಿಂದ ಧಾವಂತದಿಂದ ಕೆಲಸಗಳನ್ನು ಮಾಡುವ ಅನಿವಾರ್ಯತೆಯಿರಲಿಲ್ಲ. ತಿಂಡಿ ಮುಗಿಸಿ ೧೦ ಗಂಟೆಯ ವೇಳೆಗೆ ಧ್ವಜಾರೋಹಣಕ್ಕೆ ಕಾಲೇಜಿಗೆ ತೆರಳಿದೆ. ಕಾಲೇಜಿನಲ್ಲಿ ಧ್ವಜಾರೋಹಣ ಮುಗಿಸಿ ಚಂದ್ರಶೇಖರ ಆಜಾದ್ ಹುತಾತ್ಮರಾದ ಸ್ಥಳಕ್ಕೆ ತೆರಳಿ ಅಲ್ಲಿರುವ ಪ್ರತಿಮೆಗೆ ಪುಷ್ಪಾರ್ಚನೆಯನ್ನು ಮಾಡಿದೆವು. ಮಧ್ಯಾಹ್ನ ಊಟ ಮುಗಿಸಿ ಸಣ್ಣನಿದ್ದೆಯನ್ನೂ ಪೂರೈಸಿ ಮಾಘಮೇಳದ ಪೇಟೆ ನೋಡಲು ತೆರಳಿದೆವು. ಮೇಳದ ಜಾತ್ರೆ ಭರ್ಜರಿಯಾಗಿಯೇ ಇತ್ತು. ಗಂಗಾಯಮುನೆಯರ ತೀರದಲ್ಲಿ ದೊಡ್ಡ ಜಾಗ ಖಾಲಿಯಾಗಿದ್ದು ನೋಡಿ ಅಚ್ಚರಿಯಾಗುತ್ತಿತ್ತು. ಆದರೆ ಮಾಘಮೇಳದ ಅವಧಿಯಲ್ಲಿ ಅನೇಕ ಎಕರೆಗಳಷ್ಟು ಜಾಗ ಜನರಿಂದ ಹಾಗೂ ಅಂಗಡಿಗಳಿಂದ ತುಂಬಿ ತುಳುಕುತ್ತಿತ್ತು. ಮಾಘಮೇಳದಲ್ಲೇ ಈ ರೀತಿಯ ಜನಸಂದಣಿಯಾದರೆ ಆರು ವರ್ಷಕ್ಕೊಮ್ಮೆ ನಡೆಯುವ ಅರ್ಧಕುಂಭಮೇಳ ಹಾಗೂ ಹನ್ನೆರಡು ವರ್ಷಕ್ಕೊಮ್ಮೆ ನಡೆಯುವ ಕುಂಭಮೇಳಗಳ ಕಾಲದಲ್ಲಿ ಎಂತಹ ಜನಸಂದಣಿಯಾಗಬಹುದು ಎಂದು ಕಲ್ಪನೆ ಮನಸ್ಸಿನಲ್ಲಿ ಮೂಡಿತ್ತು. ಹನ್ನೆರಡು ವರ್ಷಗಳಿಗೊಮ್ಮೆ ನಡೆಯುವ ಕುಂಭಮೇಳ ಭಾರತದ ಅತಿ ದೊಡ್ಡ ಜಾತ್ರೆಯಂತೆ. ಮಾಘಮೇಳವನ್ನು ನೋಡಿ ಭಾರತದ ಅತಿ ದೊಡ್ಡ ಜಾತ್ರೆಯ ಟ್ರೈಲರ್ ನೋಡಿದಂತಾಯಿತು. ಮೇಳಾದ ಪೇಟೆಯಲ್ಲಿ ಅನೇಕ ಬಗೆಯ ಜೈಂಟ್ ವ್ಹೀಲ್ಗಳು ಕಣ್ಣಿಗೆ ಬಿದ್ದವು. ದೋಣಿಯಂತಿದ್ದ ೧೬ ಜನ ಕುಳಿತುಕೊಳ್ಳುವ ತೊಟ್ಟಿಲೊಂದು ಸಂಪೂರ್ಣ ತಲೆಕೆಳಗಾಗಿ ಸುಮಾರು ೨೦ ಅಡಿ ಎತ್ತರದಲ್ಲಿ ಸುತ್ತುತ್ತಿತ್ತು. ಪಟ್ಟಣ ಪ್ರದೇಶಗಳಲ್ಲಿ ಹುಟ್ಟಿ ವರ್ಷದ ಆರು ತಿಂಗಳುಗಳನ್ನು ಜಾತ್ರೆಯ ಪೇಟೆಗಳಲ್ಲೇ ಕಳೆಯುವವರಿಗೆ ಇದೊಂದು ಸಾಮಾನ್ಯ ವಿಷಯವಾದರೂ ನಮಗೊಂದು ವಿಶಿಷ್ಟವಾದ ಹೊಸ ಅನುಭವವಾಗಿತ್ತು. ತೊಟ್ಟಿಲಲ್ಲಿ ಕುಳಿತು ಆನಂದವನ್ನನುಭವಿಸಿದೆವು. ಜಾತ್ರೆ ಪೇಟೆಯನ್ನು ಸುತ್ತಿ, ತಿಂದುಂಡು ರೂಮಿಗೆ ಹಿಂದಿರುಗಿ ಊಟವನ್ನೂ ಮಾಡಿದೆವು.

ಅಂತೂ ಇಂತೂ ಯಾವುದೇ ತಲೆಬಿಸಿ, ಒತ್ತಡಗಳಿಲ್ಲದೇ ಕಳೆದ ೨೦೧೮ ರ ಗಣರಾಜ್ಯೋತ್ಸವದ ದಿನ ನನ್ನ ಜೀವನದ ವಿಶಿಷ್ಟ ದಿನವೆನಿಸಿತು.

ತ್ರಿವೇಣೀ ಸಂಗಮದ ಬಳಿಯಲ್ಲೇ ವಿಮಾನ ಗೋಪುರ ಎಂಬ ಮಂದಿರವಿದೆ. ಈ ಮಂದಿರ ಅಷ್ಟೇನೂ ಪ್ರಸಿದ್ಧವಲ್ಲ. ತಮಿಳುನಾಡಿನ ಸಂಸ್ಥೆಯೊಂದು ನಡೆಸುತ್ತಿರುವ ಈ ಮಂದಿರದ ಬಗ್ಗೆ ಸ್ಥಳೀಯರಿಗೇನೂ ಮಾಹಿತಿಯಿಲ್ಲ. ಆದರೆ ಗೂಗಲ್ ಮ್ಯಾಪ್ ನಲ್ಲಿ ಮಂದಿರವಿರದ ಸ್ಥಳವನ್ನು ತೋರಿಸುತ್ತದೆ. ಹಿಂದಿನ ವರ್ಷ ಪ್ರಯಾಗದಲ್ಲಿದ್ದ ಮಿತ್ರರು ಈ ಮಂದಿರದ ಬಗ್ಗೆ ತಿಳಿಸಿದ್ದರು. ಮ್ಯಾಪ್ ನ ಜಾಡು ಹಿಡಿದು ಹೋದರೆ ಮ್ಯಾಪ್ ತೋರಿಸಿದ ಜಾಗದಲ್ಲಿ ೪ ಅಂತಸ್ತಿನ, ಬೃಹತ್ತಾದ, ಮಂದಿರದಂತೆ ಕಾಣುವ ಕಟ್ಟಡವಿತ್ತು. ಆದರೆ ಮುಖ್ಯದ್ವಾರವನ್ನು ಮುಚ್ಚಲಾಗಿತ್ತು. ಮಂದಿರದ ಬಳಿ ವಾಚ್ ಮ್ಯಾನ್ ಕೂಡಾ ಇರಲಿಲ್ಲ. ಹಾಗಾದರೆ ಇದು ವಿಮಾನಗೋಪುರ ಮಂದಿರವಲ್ಲ, ಗೂಗಲ್ ನಲ್ಲಿ ದೋಷವಿರಬಹುದು ಎಂದು ಚಿಂತಿಸಿದೆವು. ಏನೇ ಆದರೂ ವಿಮಾನಗೋಪುರ ಮಂದಿರವನ್ನು ನೋಡಲೇಬೇಕೆಂಬ ದೃಢ ನಿರ್ಧಾರವಿತ್ತು. ಆದ್ದರಿಂದ ಕಂಡಕಂಡವರನ್ನು ಕೇಳುತ್ತಾ ಗೂಗಲ್ ಮ್ಯಾಪ್ ತೋರಿಸಿದ ಸ್ಥಳದ ಸುತ್ತಲೂ ಅಲೆದಾಡಿದೆವು. ಕೊನೆಯಲ್ಲಿ ಗೋಪುರದ ಹಿಂಭಾಗದಿಂದ ಪ್ರವೇಶ ದ್ವಾರ ದೊರೆಯಿತು. ಆ ದೇವಾಲಯದಲ್ಲಿ ಕೃಷ್ಣನ ದೊಡ್ಡದಾದ ವಿಗ್ರಹವಿತ್ತು. ದೇವಾಲಯದ ನಾಲ್ಕನೇ ಮಹಡಿಯನ್ನು ಹತ್ತಿ ನೋಡಿದರೆ ಸಂಗಮ ಹಾಗೂ ಸಂಗಮದ ಸುತ್ತಮುತ್ತಲೂ ಗಂಗಾ ಯಮುನೆಯರ ಇಕ್ಕೆಲಗಳಲ್ಲಿ ಉರಿಸಿಟ್ಟಿದ್ದ ಸಾಲು ಸಾಲು ದೀಪಗಳನ್ನು ಕಾಣಬಹುದು. ದೇವಾಲಯದ ಮುಂಬಾಗಿಲಿನಲ್ಲಿ ಪ್ರವೇಶ ನಿಷೇಧಿಸಿದ್ದರಿಂದ ಹಾಗೂ ಯಾವುದೇ ಫಲಕಗಳನ್ನು ಅಳವಡಿಸದೇ ಇದ್ದುದರಿಂದ ಹೊರಗಿನಿಂದ ನೋಡಿದರೆ ದೇವಾಲಯ ನಿರ್ಮಾಣ ಹಂತದಲ್ಲಿರುವಂತೆ ಕಾಣುತ್ತಿತ್ತು. ಮಾಘ ಮೇಳದ ದಿನಗಳಲ್ಲೂ ದೇವಾಲಯದಲ್ಲಿ ವಿಶೇಷವಾದ ಜನಸಂದಣಿ ಇಲ್ಲದಿರುವುದಕ್ಕೆ ಇದೇ ಕಾರಣವಾಗಿರಬಹುದು. ದೇವಾಲಯದ ಮೆಟ್ಟಿಲುಗಳನ್ನು ಹತ್ತಿ ರಮಣೀಯವಾದ ದೃಶ್ಯಗಳನ್ನು ಕಣ್ತುಂಬಿಕೊಂಡೆವು. ರೂಮಿಗೆ ವಾಪಾಸ್ಸಾಗುವಾಗ ಮಾಘಮೇಳಾದ ವಸ್ತು ಪ್ರದರ್ಶನದಲ್ಲಿ ಸ್ಥೂಲವಾಗಿ ಕಣ್ಣಾಡಿಸಿದೆವು. ನಾನು ಕೊಳ್ಳುಬಾಕನಲ್ಲದ್ದರಿಂದಲೋ ಏನೋ ವಸ್ತುಪ್ರದರ್ಶನದಲ್ಲಿ ವಿಶೇಷವಾದುದೇನೂ ಕಣ್ಣಿಗೆ ಬೀಳಲಿಲ್ಲ. ಶೃಂಗೇರಿಯ ನವರಾತ್ರೆ ಪೇಟೆ, ಧರ್ಮಸ್ಥಳದ ದೀಪೋತ್ಸವದ ವಸ್ತುಪ್ರದರ್ಶನಗಳಲ್ಲಿಟ್ಟ ವಸ್ತುಗಳನ್ನೇ ಇಲ್ಲಿಯೂ ಮಾರಾಟಕ್ಕಿಟ್ಟಿದ್ದಾರೆ ಎಂದೆನಿಸಿತು.

೩೧-೦೧-೨೦೧೮ರ ಬುಧವಾರ ಚಂದ್ರಗ್ರಹಣವಿತ್ತು. ಗ್ರಹಣದ ಕಾರಣ ವಿದ್ಯಾಲಯದಲ್ಲಿ ತರಗತಿಗಳಿರಲಿಲ್ಲ. ಆ ದಿನ ಗ್ರಹಣದ ಪುಣ್ಯಕಾಲದಲ್ಲಿ ಸಂಗಮಸ್ನಾನ ಮಾಡುವುದೆಂದು ನಿಶ್ಚಯಿಸಿದೆವು. ಸಂಗಮ ಸ್ನಾನ ಶ್ರೇಷ್ಠವಾದುದು, ಅದರಲ್ಲೂ ಮಾಘಮಾಸದ ಹುಣ್ಣಿಮೆಯ ದಿನ ಮಾಡುವ ಸಂಗಮ ಸ್ನಾನ ಅತ್ಯಂತ ಶ್ರೇಷ್ಠ. ಆ ದಿನವೇ ಗ್ರಹಣಪುಣ್ಯಕಾಲವೂ ಪ್ರಾಪ್ತವಾದದ್ದು ಸಂಗಮ ಸ್ನಾನವನ್ನು ಮತ್ತಷ್ಟು ಶ್ರೇಷ್ಠವನ್ನಾಗಿಸಿತ್ತು. ಸ್ನಾನದಿಂದ ಪಾವನರಾಗುವ ಪುಣ್ಯ ಅವಕಾಶ ದೊರೆತುದಕ್ಕೆ ಸಂಭ್ರಮಪಡುತ್ತಾ ಸಂಗಮದೆಡೆಗೆ ನಡೆದೆವು. ಸಂಗಮಸ್ಥಾನದಲ್ಲಿ ಅಷ್ಟು ಜನ ಸೇರಿದ್ದರೂ ನೂಕುನುಗ್ಗಲಾಗಲೀ ಗಲೀಜಾಗಲೀ  ಇರಲಿಲ್ಲ. ಮಾಘಮೇಳದ ಅಚ್ಚುಕಟ್ಟಾದ ನಿರ್ವಹಣೆ ಅಚ್ಚರಿಯನ್ನು ಮೂಡಿಸಿತು. "ಸಂಗಮಸ್ಥಳದ ಸ್ವಚ್ಛತೆಯನ್ನು ಕಾಪಾಡಲು ಹೊಸದಾಗಿ ಆಯ್ಕೆಯಾದ ಉತ್ತರಪ್ರದೇಶ ಸರ್ಕಾರ ಶ್ರಮಿಸುತ್ತಿದೆ. ಅದೇ ರೀತಿಯಲ್ಲಿ ಮುಂದಿನ ವರ್ಷ ನಡೆಯುತ್ತಿರುವ ಅರ್ಧಕುಂಭ ಮೇಳಕ್ಕೂ ತಯಾರಿಗಳು ಭರದಿಂದ ಸಾಗುತ್ತಿವೆ. ಪ್ರಯಾಗದಿಂದಲೇ ಅನೇಕರು ಭಾರತದ ಪ್ರಧಾನಮಂತ್ರಿಗಳಾಗಿದ್ದರೂ ಪ್ರಯಾಗಕ್ಕೆ ಅಭಿವೃದ್ಧಿಯ ಭಾಗ್ಯ ಲಭಿಸಿರಲಿಲ್ಲ. ಆದರೀಗ ಹೊಸ ಸರ್ಕಾರ ಪ್ರಯಾಗದ ಅಭಿವೃದ್ಧಿಯನ್ನು ಯೋಚಿಸುತ್ತಿರುವುದನ್ನು ಕಂಡಾಗ ಸಂತಸವಾಗುತ್ತಿದೆ." ಎಂಬ ವಾದ ಪ್ರತಿವಾದಗಳು ಸ್ಥಳೀಯಜನರ ನಡುವೆ ನಡೆಯುತ್ತಿದ್ದವು. ಸಂಗಮದಲ್ಲಿ ಸ್ನಾನ ಮಾಡಿದ ನಂತರ ರೂಮಿಗೆ ಮರಳಿದ ಗಣೇಶ ಗ್ರಹಣಪುಣ್ಯಕಾಲದಲ್ಲಿ ಲಕ್ಷ್ಮೀನಾರಾಯಣಹೃದಯ ಪಾರಾಯಣವನ್ನು ನಡೆಸಿದ. ಉಳಿದವರೂ ಕೂಡಾ ವೃಥಾ ಕ್ರಿಯಾಕಲಾಪಾಲಾಪಗಳಲ್ಲಿ ತೊಡಗಿ ಕಾಲವನ್ನು ಕಳೆಯದೇ ಯಥಾಶಕ್ತಿ ಜಪತಪಾದಿಗಳನ್ನು ನಡೆಸಿದೆವು. ೮.೪೫ ಕ್ಕೆ ಗ್ರಹಣ ಮೋಕ್ಷದ ನಂತರ ಗಂಗಾತಟಕ್ಕೆ ಸ್ನಾನಕ್ಕೆ ತೆರಳಿದೆ. ಗ್ರಹಣಮೋಕ್ಷವಾಗುವುದನ್ನೇ ಕಾಯುತ್ತಿದ್ದ ಅನೇಕ ಮಂದಿ ಗ್ರಹಣ ಮೋಕ್ಷವಾಗುತ್ತಿದ್ದಂತೆ ಗಂಗೆಯಲ್ಲಿ ಮುಳುಗಲಾರಂಭಿಸಿದರು. ನಾನು ಕೂಡಾ ಗಂಗೆಯಲ್ಲಿ ಮುಳುಗಿ ರೂಮಿಗೆ ಬಂದು ಗಂಜಿ ಊಟ ಮಾಡಿ ಮಲಗಿದೆ.

ಮರುದಿನ ಪ್ರಸಿದ್ಧ ಸಿನೆಮಾ ಪದ್ಮಾವತ್ ವೀಕ್ಷಿಸಲು ಟಿಕೆಟ್ ಬುಕ್ ಮಾಡಿದ್ದೆವು. ೭ ಡಿ ಸಿನೆಮಾಗಳು ಬಿಡುಗಡೆಯಾಗುತ್ತಿರುವ ಈ ಕಾಲದಲ್ಲೂ ನಾನಾಗಲೀ ನನ್ನ ಗೆಳೆಯರಾಗಲೀ ೩ಡಿ ಸಿನೆಮಾವನ್ನೂ ನೋಡಿರಲಿಲ್ಲ. ಆದ್ದರಿಂದ ಬಹಳ ಉತ್ಸಾಹದಿಂದ ೩ಡಿ ಸಿನೆಮಾವನ್ನು ನೋಡಲು ಹೊರಟೆವು. ಸಿನೆಮಾದ ಆರಂಭದಲ್ಲಿ ಅಲ್ಲಾವುದ್ದೀನ್ ಖಿಲ್ಜಿ ತೆಗೆದುಕೊಂಡು ಬಂದಿದ್ದ ಉಷ್ಟ್ರಪಕ್ಷಿ ನಮ್ಮನ್ನೇ ನುಂಗಲು ಬರುತ್ತಿರುವಂತೆ ಕಾಣುತ್ತಿತ್ತು. ಪದ್ಮಾವತಿಯ ಸಖಿಯರು ಅಲ್ಲಾವುದ್ದೀನ್ ಖಿಲ್ಜಿಯತ್ತ

ಎಸೆಯುತ್ತಿದ್ದ ಕಲ್ಲುಗಳು ನನ್ನ ಮೇಲೆಯೇ ಬೀಳುತ್ತಿವೆಯೇನೋ ಎಂದೆನಿಸುತ್ತಿತ್ತು. ಇದನ್ನು ಬಿಟ್ಟರೆ ಖಡಿ ಯಲ್ಲಿ ವಿಶೇಷತೆಗಳೇನೂ ಕಾಣಲಿಲ್ಲ. ಖಡಿ ಯ ಹೊಸ ಅನುಭವಗಳನ್ನು ಪಡೆದು ಹಿಂದಿರುಗಿದೆವು.

ಎಂದಿನಂತೆ ಗಂಗಾಸ್ನಾನ ನಡೆಯುತ್ತಿತ್ತು. ಪ್ರತಿದಿನವೂ ಸ್ನಾನ ಮಾಡುತ್ತಿದ್ದರಿಂದ ಗಂಗೆಯಲ್ಲಿ ನೀರು ಇಳಿಯುತ್ತಿರುವುದೂ, ಚಳಿ ಕಡಿಮೆಯಾಗುತ್ತಿರುವುದರಿಂದ ಸ್ನಾನ ಮಾಡುವ ಭಕ್ತರ ಸಂಖ್ಯೆಯಲ್ಲಿ ಏರಿಕೆಯಾಗುತ್ತಿರುವುದೂ ಸ್ಪಷ್ಟವಾಗಿ ಭಾಸವಾಗುತ್ತಿತ್ತು. ಮಾಘಮೇಳ ಮುಗಿದಿದ್ದರಿಂದ ಟೆಂಟ್ ಗಳನ್ನು ಕಟ್ಟಿಕೊಂಡಿದ್ದ ಜನರು ಟೆಂಟ್ ಗಳನ್ನು ತೆರವುಗೊಳಿಸಿದ್ದರು. ಮಾಘಮೇಳದ ಸಂದರ್ಭದಲ್ಲಿ ಗಂಗಾನದಿಗೆ ನಿರ್ಮಿಸಲಾಗಿದ್ದ ೫ ತಾತ್ಕಾಲಿಕ ಸೇತುವೆಗಳನ್ನೂ ತೆರವುಗೊಳಿಸಿದ್ದರು. ಗಂಗಾನದಿಯ ತೀರದಲ್ಲಿ ಸೌತೆಕಾಯಿ, ಸೋರೆಕಾಯಿ, ಕಕಡೀ(ಗಂಗಾತೀರದಲ್ಲಿ ಬೆಳೆಯುವ ನುಗ್ಗೆಕಾಯಿ ಆಕಾರದ, ಸೌತೆಕಾಯಿಯ ರುಚಿಯ ತರಕಾರಿ) ಮುಂತಾದ ತರಕಾರಿಗಳನ್ನು ಬೆಳೆಸಲು ಆರಂಭಿಸಿದ್ದರಿಂದ ಗಂಗಾನದಿಯಲ್ಲಿ ಪಾಚಿ ತೇಲಿಬರುತ್ತಿತ್ತು. ರಜಾ ದಿನಗಳಲ್ಲಿ ಮಧ್ಯಾಹ್ನ ಸ್ನಾನ ಮಾಡಲು ತೆರಳಿದರೆ ವಿಸರ್ಜನೆ ಮಾಡಿದ್ದ ಅಸ್ಥಿಗಳು ಇದ್ದಿಲಿನ ರೂಪದಲ್ಲಿ ತೇಲಿಬರುತ್ತಿದ್ದವು. ಆದರೂ ಗಂಗಾನದಿಯ ನೀರು ಶುದ್ಧವಾಗಿಯೇ ಇರುತ್ತಿತ್ತು. ನಮ್ಮ ಊರಿನಲ್ಲಿ ನದಿಗಳಿಗಿಳಿದರೆ ನದಿಯ ನೀರು ಬಗ್ಗಡವಾಗಿ ಕೆಸರು ಹೊರಬರುವಂತೆ ಗಂಗಾನದಿಯಲ್ಲಾಗುತ್ತಿರಲಿಲ್ಲ. ಶಿವರಾತ್ರಿಯ ದಿನ ಮುಂಜಾನೆ ಸ್ನಾನಕ್ಕೆ ತೆರಳಿದಾಗ ಎಮ್ಮೆಗಳ ಸಾಲೊಂದು ಗಂಗಾನದಿಗಿಳಿಯಿತು. ಗಂಗಾನದಿಯಲ್ಲಿ ಮಧ್ಯಭಾಗಕ್ಕೆ ತೆರಳಿದಂತೆ ನೀರಿನ ಸೆಳೆತ ಹೆಚ್ಚಾಗಿರುತ್ತಿತ್ತು. ಅನುಭವಿ ಅಂಬಿಗರು ಕೂಡಾ ಕಷ್ಟಪಟ್ಟು ದೋಣಿಯನ್ನು ದಡದಿಂದ ದಡಕ್ಕೆ ಮುಟ್ಟಿಸುತ್ತಿದ್ದರು. ಆದರೆ ಎಮ್ಮೆಗಳು ಮಾತ್ರ ಆನಂದದಿಂದ ಮೂಗನ್ನು ಮಾತ್ರ ನದೀ ನೀರಿನಿಂದ ಮೇಲೆತ್ತಿಕೊಂಡು ನದಿಯನ್ನು ದಾಟುತ್ತಿದ್ದ ರಮಣೀಯ ದೃಶ್ಯ ಕಣ್ಣಿಗೆ ಬಿದ್ದಿತು.

ಪ್ರತಿದಿನವೂ ಗಂಗಾಸ್ನಾನದಂತೆ ಸಂಸ್ಕೃತಗಂಗಾದಲ್ಲಿನ ಅಧ್ಯಯನವೂ ಯಾವುದೇ ವಿಘ್ನಗಳಿಲ್ಲದೇ ಸಾಗುತ್ತಿತ್ತು. ಮೊದಲೇ ಹೇಳಿದಂತೆ ಸಂಸ್ಕೃತಗಂಗಾದಲ್ಲಿ ಕುಳಿತುಕೊಳ್ಳಲು ೭-೮ ಕುರ್ಚಿಗಳಷ್ಟೇ ಇದ್ದವು. ನಾನು ಪ್ರತಿದಿನವೂ ಮೂಲೆಯಲ್ಲಿದ್ದ ಕುರ್ಚಿಯೊಂದರಲ್ಲಿ ಕುಳಿತು ಅಧ್ಯಯನ ನಡೆಸುತ್ತಿದ್ದೆ. ಅದೊಂದು ಟ್ಯೂಶನ್ ಸೆಂಟರ್ ಆಗಿದ್ದರಿಂದ ಅನೇಕ ವಿದ್ಯಾರ್ಥಿಗಳು ಬಂದು ಅಧ್ಯಯನ ನಡೆಸುತ್ತಿದ್ದರು. ಉತ್ತರಭಾರತದಲ್ಲಿ ಅದರಲ್ಲೂ ಬಿಹಾರ ಹಾಗೂ ಉತ್ತರಪ್ರದೇಶಗಳಲ್ಲಿ ಸರಕಾರಿ

ನೌಕರಿಗಳಿಗಾಗಿ ನಡೆಯುವ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಅತ್ಯಂತ ಪರಿಶ್ರಮಪಟ್ಟು ಅಧ್ಯಯನ ನಡೆಸುತ್ತಾರೆ. ಇಲ್ಲಿನ ಸರ್ಕಾರಗಳೂ ಅಷ್ಟೇ ಪ್ರಮಾಣದಲ್ಲಿ ಉದ್ಯೋಗವನ್ನು ನೀಡುತ್ತವೆಯೇನೋ. ಸ್ಪರ್ಧಾತ್ಮಕ ಪರೀಕ್ಷೆಗಳ ವೇಳಾಪಟ್ಟಿ, ಪ್ರಶ್ನೆ ಪತ್ರಿಕೆಗಳ ಮಾದರಿ, ಉದ್ಯೋಗದಲ್ಲಿನ ಮೀಸಲಾತಿ, ಮುಂತಾದ ವಿಷಯಗಳ ಬಗೆಗೆ ಸರ್ವಜ್ಞರಾಗಿರುತ್ತಾರೆ. ವಿದ್ಯಾರ್ಥಿಗಳು ಇಂತಹ ವಿಷಯಗಳ ಬಗೆಗೆ ಜ್ಞಾನವನ್ನು ಸಂಪಾದಿಸುವ ಸಮಯದಲ್ಲಿ ಪಾಠ್ಯಕ್ರಮದಲ್ಲಿನ ವಿಷಯಗಳನ್ನು ಓದಿದ್ದರೆ ಅನೇಕ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಸಫಲವಾಗಿರುತ್ತಿದ್ದರು ಎಂದು ಹೇಳಿದರೆ ಉತ್ಪ್ರೇಕ್ಷೆಯಾದು. ಕೆಲವು ಬಾರಿ ಸಂಸ್ಕೃತಗಂಗಾಕ್ಕೆ ತೆರಳಿದಾಗ ವಿದ್ಯಾರ್ಥಿಗಳು ಇಂತಹ ಪರೀಕ್ಷೆಗಳಿಗೆ ವಿದ್ಯಾರ್ಥಿಗಳು ತಯಾರಿ ನಡೆಸುತ್ತಿರುತ್ತಿದ್ದರು. ಆದರೂ ನಾನು ಹೋದ ತಕ್ಷಣ ಮೂಲೆಯಲ್ಲಿನ ಜಾಗವನ್ನು ನನಗೇ ಬಿಟ್ಟು ಕೊಡುತ್ತಿದ್ದರು. ಸಂಸ್ಕೃತಗಂಗಾವನ್ನು ಕಟ್ಟಿ ಬೆಳೆಸಿದ್ದ ಸರ್ವಜ್ಞಭೂಷಣಮಿಶ್ರಾ ಕೂಡಾ ನನ್ನ ಅಧ್ಯಯನವನ್ನು ಪ್ರೋತ್ಸಾಹಿಸುತ್ತಿದ್ದರು. ನನಗಂತೂ  ಇಂತಹ ಒಂದು ಸ್ಥಳ ದೊರಕಿದ್ದರಿಂದ ಪ್ರಯಾಗಕ್ಕೆ ಬಂದುದು ಸಾರ್ಥಕವಾಯಿತು ಎಂದೆನಿಸುತ್ತಿತ್ತು.

ಪ್ರಯಾಗಕ್ಕೆ ಬಂದು ಮೂರುವರೆ ತಿಂಗಳುಗಳು ಕಳೆದಿದ್ದರೂ ಭಗವಂತನ ಕೃಪೆಯಿಂದ ನನ್ನ ಆರೋಗ್ಯದಲ್ಲಿ ಏರುಪೇರಾಗಿರಲಿಲ್ಲ. ಹಿರಿಯರು, ಅಧ್ಯಾಪಕರು ಹಾಗೂ ಹಿತೈಷಿಗಳು ಆರೋಗ್ಯದ ಬಗ್ಗೆ ಗಮನವಿರಲಿ ಎಂದು ಪದೇ ಪದೇ ಫೋನ್ ನ ಮೂಲಕ ಸೂಚಿಸುತ್ತಿದ್ದರು. ಆದ್ದರಿಂದ ಆಹಾರದ ಬಗ್ಗೆ ಕಾಳಜಿ ವಹಿಸುತ್ತಿದ್ದೆ. ಅಲ್ಲದೇ ನನ್ನೊಂದಿಗಿದ್ದ ಮಿತ್ರರೂ ಆಹಾರದ ವಿಷಯದಲ್ಲಿ ಅತ್ಯಂತ ಕಾಳಜಿ ವಹಿಸುತ್ತಿದ್ದರಿಂದ ಊಟ ತಿಂಡಿಗಳು ನಮ್ಮ ಊರಿನ ಕ್ರಮದಂತೆಯೇ ನಡೆಯುತ್ತಿದ್ದವು. ಆದರೆ ಪ್ರಯಾಗದ ಬೇಕರಿಗಳಲ್ಲಿನ ವಿಶಿಷ್ಟ ತಿಂಡಿಗಳು ನನ್ನನ್ನು ಕೈಬೀಸಿ ಕರೆಯುತ್ತಿದ್ದವು. ಇದು ನನ್ನ ನಾಲಗೆ ಚಪಲವೋ ಎಂದು ಕೆಲವೊಮ್ಮೆ ಅನಿಸುತ್ತಿತ್ತು. ಆದರೆ ಈ ಚಪಲ ನನ್ನ ಅಧೋಗತಿಗೆ ಕಾರಣವಾಗುತ್ತಿಲ್ಲ ಎಂಬುವುದು ಸ್ಪಷ್ಟವಾಗಿತ್ತು. ನನ್ನೊಂದಿಗಿದ್ದ ಒಂದಿಬ್ಬರು ಮಿತ್ರರಂತೂ 'ಯಾವಾಗ ಊರಿಗೆ ಹೋಗಿ ದೋಸೆ, ಇಡ್ಲಿ, ಮಜ್ಜಿಗೆಹುಳಿ, ತಂಬಳಿ ಮುಂತಾದ ಊರಿನ ಅಡುಗೆಯನ್ನು ಉಣ್ಣುತ್ತೇನೋ' ಎಂದು ಹಪಹಪಿಸುತ್ತಿದ್ದರು. ನನಗೆ ಮಾತ್ರ ನನ್ನ ಎದುರಿಗಿದ್ದ ಭಕ್ಷ್ಯಗಳನ್ನು ಕಂಡಾಗ ತಿನ್ನಬೇಕೆಂದೆನಿಸುತ್ತಿತ್ತೇ ಹೊರತು ಇಂತಹುದನ್ನೇ ತಿನ್ನಬೇಕೆಂದು ಅನಿಸುತ್ತಿರಲಿಲ್ಲ. ಉತ್ತರ ಭಾರತದ ಮಿತ್ರರು ಯಾವುದಾದರೂ ತಿಂಡಿಯನ್ನು ಕೊಟ್ಟರೆ ಖುಷಿಯಿಂದ

ಸವಿಯುತ್ತಿದ್ದೆ. ಉತ್ತರಾದಿ ಮಠದ ಮುಖ್ಯಸ್ಥ ರಾಘವೇಂದ್ರ ಆಚಾರ್ ಕೂಡಾ ಆಗಾಗ ಪ್ರಯಾಗದ ವಿಶಿಷ್ಟ ತಿಂಡಿಗಳನ್ನು ನೀಡುತ್ತಿದ್ದರು.

ಸಾಮಾನ್ಯವಾಗಿ ಪ್ರಯಾಗದ ಪೇಟೆಯಲ್ಲಿ ತಿರುಗಾಡುತ್ತಿರುವಾಗ ಛೋಲಾ ಭಟೂರಾ ಎಂಬ ಬೋರ್ಡ್ ಅನೇಕ ಕಡೆಗಳಲ್ಲಿ ಕಾಣಸಿಗುತ್ತಿತ್ತು. ಈ ಛೋಲಾಭಟೂರಾವನ್ನು ತಿನ್ನಬೇಕೆಂದು ರಸ್ತೆಯ ಬದಿಯಲ್ಲಿನ ತಿಂಡಿ ಗಾಡಿಯೊಂದರ ಬಳಿಗೆ ತೆರಳಿದೆ. ಭಟೂರಾ ಎಂದರೆ ಮೈದಾ ಹಿಟ್ಟಿನ ದೊಡ್ಡ ಪೂರಿ ಹಾಗೂ ಛೋಲಾ ಎಂದರೆ ಸಾಗು ಎಂದು ತಿಳಿಯಿತು. "ಉತ್ತರ ಭಾರತದ ಜನರ ತಿಂಡಿಗಳಲ್ಲಿ ವೆರೈಟಿಗಳಿಲ್ಲ. ೩೬೫ ದಿನಗಳಲ್ಲೂ ಪೂರಿಯನ್ನೇ ತಿನ್ನುತ್ತಾರೆ" ಎಂದು ಅನೇಕರು ಹೇಳುತ್ತಿರುವುದನ್ನು ಕೇಳಿದ್ದೆ. ಆದರೆ ಉತ್ತರ ಭಾರತದ ತಿಂಡಿಗಳಲ್ಲೂ ವೆರೈಟಿಗಳಿವೆ ಅದನ್ನು ಸವಿಯುವ ನಾಲಗೆ, ತಿಳಿಯುವ ಹೃದಯ ನಮ್ಮದಾಗಿಲ್ಲ ಎಂದೆನಿಸಿತು. ಅಲ್ಲದೇ ದಕ್ಷಿಣ ಭಾರತಕ್ಕೆ ಬಂದ ಉತ್ತರಭಾರತೀಯರಿಗೂ ಸಾರು, ಸಾಂಬಾರು, ಹುಳಿ, ಮಜ್ಜಿಗೆಹುಳಿ, ಕಾಯಿರಸ ಮೊದಲಾದುವುಗಳಲ್ಲಿ ಭೇದ ತಿಳಿಯಲಿಕ್ಕಿಲ್ಲ. ಅದೇ ರೀತಿ ದಕ್ಷಿಣ ಭಾರತದವರಿಗೂ ಭಟೂರಾ, ಪೂರಿ, ಕಚೋರಿ ಮುಂತಾದುವುಗಳಲ್ಲಿ ವ್ಯತ್ಯಾಸ ಕಾಣದಿದ್ದರೆ ಆಶ್ಚರ್ಯವೇನಲ್ಲ. ಉತ್ತರಭಾರತದಲ್ಲಿ ೬ ತಿಂಗಳುಗಳ ಕಾಲ ವಾಸವಾಗಿದ್ದುಕೊಂಡು ಇಲ್ಲಿನ ವಿಶಿಷ್ಟ ತಿಂಡಿ ತಿನಿಸುಗಳನ್ನು ಸವಿಯದಿದ್ದರೆ ಉತ್ತರ ಭಾರತದ ವಾಸ ವ್ಯರ್ಥವಾಗುತ್ತದೆ ಎಂದೆನಿಸಿತು. ಇಲ್ಲಿಗೆ ಬಂದ ಮುಖ್ಯ ಕಾರಣ ವಿದ್ಯಾವಾರಿಧಿಯ ತರಗತಿಗಳಾದರೂ ಇದರಿಂದಾಗುವ ಅನೇಕ ಸಣ್ಣ ಸಣ್ಣ ಪ್ರಯೋಜನಗಳನ್ನೂ ಬಿಡಬಾರದು ಎಂದುಕೊಂಡು ದಾರಾಗಂಜ್ ನ ಪ್ರಸಿದ್ಧ ಬೇಕರಿಯಾದ 'ಜೆ.ಕೆ ಸ್ವೀಟ್ಸ್'ಗೆ ಆಗಾಗ ಭೇಟಿ ನೀಡಲಾರಂಭಿಸಿದೆ. ಅದರ ಪಕ್ಕದಲ್ಲೇ 'ಮೋಹಿತ್ ಸ್ವೀಟ್ಸ್' ಎಂಬ ಮತ್ತೊಂದು ಬೇಕರಿಯಿತ್ತು. ಕಳೆದ ವರ್ಷ ಪ್ರಯಾಗದಲ್ಲಿದ್ದ ಮಿತ್ರರಿಗೆ ಮೋಹಿತ್ ಸ್ವೀಟ್ಸ್ ನ ಮಾಲಕನೊಂದಿಗೆ ಯಾವುದೋ ಕ್ಷುದ್ರ ವಿಷಯಕ್ಕೆ ವೈಮನಸ್ಯವುಂಟಾಗಿತ್ತು. ಆದ್ದರಿಂದ ಅವರು ಮೋಹಿತ್ ಸ್ವೀಟ್ಸ್ ಅನ್ನು ರೆಕಮಂಡ್ ಮಾಡಿರಲಿಲ್ಲ. ಆದರೆ ಮೋಹಿತ್ ಸ್ವೀಟ್ಸ್ ನ ಮಾಲಕ ನಮ್ಮೊಂದಿಗೆ ಸೌಮನಸ್ಯದಿಂದಲೇ ವರ್ತಿಸಿದ. ಹೀಗೆ ಅನಾರೋಗ್ಯ ಬಾಧಿಸದಿದ್ದರೆ ಉತ್ತರ ಪ್ರದೇಶದ ವಿಶಿಷ್ಟ ತಿಂಡಿಗಳನ್ನು ಒಂದೊಂದಾಗಿ ಸವಿಯಬೇಕು ಎಂದು ನಿರ್ಧರಿಸಿದೆ. ನನ್ನ ಆರೋಗ್ಯವನ್ನು ಕಾಪಾಡುತ್ತಿರುವುದಕ್ಕೆ ಭಗವಂತನಿಗೆ ಪ್ರಣಾಮಗಳನ್ನು ಸಲ್ಲಿಸುತ್ತಾ, ಈಗಿನ ನನ್ನ ವರ್ತನೆಯಿಂದಾಗಿ ಮುಂದೆ ದೀರ್ಘಕಾಲಿಕ ದುಷ್ಪರಿಣಾಮಗಳು ಆಗದಿರಲಿ ಎಂದು ಪ್ರಾರ್ಥಿಸುತ್ತಿದ್ದೆ. ಹೀಗೆ

ತಿಂಡಿಗಳನ್ನು ಸವಿಯುವುದು ಹಾಗೂ ಪ್ರಾರ್ಥನೆಯನ್ನು ಸಲ್ಲಿಸುವುದು ಎಂಬ ಎರಡು ಕೆಲಸಗಳನ್ನು ನನ್ನ ನಾಲಗೆ ಅಚ್ಚುಕಟ್ಟಾಗಿ ನಿರ್ವಹಿಸುತ್ತಿತ್ತು.

ಡಿಸೆಂಬರ್ ತಿಂಗಳ ಕೊನೆಯಲ್ಲಿ ಮಥುರಾದಿಂದ ಹಿಂದಿರುಗಿದ ನಂತರ ಎಲ್ಲಿಗೂ ತಿರುಗಾಟಕ್ಕೆ ಹೋಗಿರಲಿಲ್ಲ. ಇದಕ್ಕೆ ಕಾರಣಗಳೂ ಅನೇಕ. ಜನವರಿ-ಫೆಬ್ರುವರಿ ತಿಂಗಳುಗಳಲ್ಲಿ ಚಳಿ ಅತಿಯಾಗಿ ಇರುತ್ತಿತ್ತು. ಉತ್ತರಪ್ರದೇಶದ ಚಳಿ ಮೂಳೆಗಳ ಮೇಲೆ ದುಷ್ಪರಿಣಾಮಗಳನ್ನು ಉಂಟು ಮಾಡುತ್ತದೆಯಂತೆ. ಯೌವನದ ಹುಮ್ಮಸ್ಸಿನಲ್ಲಿರುವ ನಮಗೆ ಚಳಿ ಅಷ್ಟಾಗಿ ಗೊತ್ತಾಗದಿದ್ದರೂ ದೀರ್ಘಕಾಲದ ದುಷ್ಪರಿಣಾಮಗಳನ್ನು ಚಳಿ ಉಂಟುಮಾಡುತ್ತದೆಯಂತೆ. ಆದ್ದರಿಂದ "ಓಢ್ ಪಹನ್ಕೆ ರಹಿಯೇ"(ಹೊದ್ದುಕೊಂಡು, ಸ್ವೆಟರ್ ಮುಂತಾದ ಬಟ್ಟೆಗಳನ್ನು ತೊಟ್ಟುಕೊಂಡಿರಿ) ಎಂದು ಸ್ಥಳೀಯರು ಎಚ್ಚರಿಸುತ್ತಿದ್ದರು. ಉತ್ತರಾದಿ ಮಠದ ಮುಖ್ಯಸ್ಥ ರಾಘವೇಂದ್ರ ಆಚಾರ್ ಅವರಂತೂ ಸ್ವೆಟರ್ ಧರಿಸದೇ ಓಡಾಡುವುದನ್ನು ಕಂಡಾಗ ಹೀಗೆ ಸ್ವೆಟರ್ ಧರಿಸದೇ ತಿರುಗಾಡುವುದು ಯುಕ್ತವಲ್ಲ ಎಂಬ ಅಭಿಪ್ರಯವನ್ನು ಕನ್ನಡದಲ್ಲಿ ವ್ಯಕ್ತಪಡಿಸಲಾಗದೇ "ನೀವು ಸರಿ ಇಲ್ಲ" ಎನ್ನುತ್ತಿದ್ದರು. ಅಲ್ಲದೇ ನಮ್ಮ ಊರಿಗಿಂತ ಚಳಿ ಹೆಚ್ಚಾಗಿರುವುದು ನನಗೂ ಅರಿವಿಗೆ ಬರುತ್ತಿತ್ತು. ಇಲ್ಲಿ ಚಳಿಗಾಲದಲ್ಲಿ ಸ್ವೆಟರ್ ಅಂತೂ ಸರ್ವೇಸಾಮಾನ್ಯ ಉಡುಪು. ಅದಿಲ್ಲದೇ ಮನೆಯಿಂದ ಹೊರಬೀಳುವುದೇ ಇಲ್ಲ. ಹಾಗೆಯೇ ಚಳಿಯಿಂದ ರಕ್ಷಣೆಗಾಗಿ ಇನ್ನರ್ ಎಂಬ ವಿಶಿಷ್ಟ ಉಡುಪುಗಳನ್ನು ಧರಿಸುತ್ತಾರೆ. ಸ್ನಾನ ಮಾಡಿದ ದಿನ ಮೊದಲಿಗೆ ಇನ್ನರ್ ಧರಿಸಿ, ಅದರ ಮೇಲೆ ಅಂಗಿ ಪ್ಯಾಂಟುಗಳನ್ನು ಧರಿಸಿ, ಪುನಃ ಅದರ ಮೇಲೆ ಸ್ವೆಟರ್ ಧರಿಸುವುದರಿಂದ ಚಳಿಯಿಂದ ಸಂಪೂರ್ಣವಾಗಿ ರಕ್ಷಣೆಯನ್ನು ಪಡೆಯಬಹುದು. ನಮ್ಮಲ್ಲಿ ಒಂದಿಬ್ಬರು ಗೆಳೆಯರು ಇನ್ನರ್ ತೊಡುತ್ತಿದ್ದರು. ಮೊದಲೇ ಚಳಿಯ ಬಗ್ಗೆ ಅಷ್ಟೇನೂ ಹೆದರದ ನಾನು "ಇನ್ನರ್ ಇಲ್ಲದೇ ಚಳಿಗಾಲವನ್ನು ಕಳೆಯಬಹುದು" ಎಂದಿದ್ದ ಗಣೇಶಕೃಷ್ಣನ ಮಾತಿನಿಂದಾಗಿ ಇನ್ನರ್ ಖರೀದಿಸುವ ಅವಶ್ಯಕತೆ ಇಲ್ಲ. ಎಂದು ನಿರ್ಧರಿಸಿದ್ದೆ. ಚಳಿಗಾಲದಲ್ಲಿ ಕೈ ಹಾಗೂ ಕಾಲುಗಳು ಸದಾಕಾಲ ತಂಪಾಗಿ ಫ್ರಿಡ್ಜ್ ನಲ್ಲಿ ಇಟ್ಟಂತೆ ಆಗುವುದರಿಂದ ಎಲ್ಲರೂ ಸಾಕ್ಸ್ ಗಳನ್ನು ಧರಿಸುತ್ತಿದ್ದರು. ವಿಶೇಷವೆಂದರೆ ನಾನು ಕೂಡಾ ಸಾಕ್ಸ್ ಗಳನ್ನು ಖರೀದಿಸಿದ್ದೆ. ಅತಿ ಹೆಚ್ಚು ಚಳಿ ಇದ್ದ ವಾರ ನಾನು ಅಷ್ಟಾವಧಾನಕ್ಕಾಗಿ ಊರಿಗೆ ತೆರಳಿದ್ದರಿಂದ ಚಳಿ ನನ್ನನ್ನು ಅಷ್ಟಾಗಿ ಬಾಧಿಸಿರಲಿಲ್ಲ.

ಫೆಬ್ರುವರಿ ತಿಂಗಳ ಉತ್ತರಾರ್ಧದಲ್ಲಿ ಚಳಿ ಕಡಿಮೆಯಾದರೂ ತಿರುಗಾಟಕ್ಕೆ ಹೋಗೋಣವೆಂದರೆ ಗೆಳೆಯರಾದ ರವಿಶಂಕರ ಹಾಗೂ ಗಣೇಶ ಊರಿಗೆ ತೆರಳಿದ್ದರು.

ಐದು ಜನ ಒಟ್ಟಿಗೇ ತಿರುಗಾಟಕ್ಕೆ ತೆರಳಿದರೆ ವಸತಿ ಹಾಗೂ ಓಡಾಟಗಳಿಗೆ ಅನುಕೂಲವಾಗುತ್ತದೆ ಎಂಬ ಕಾರಣದಿಂದ ಎಲ್ಲರೂ ಬಂದ ನಂತರ ಒಟ್ಟಾಗಿಯೇ ತಿರುಗಾಟಕ್ಕೆ ಹೋಗುವುದೆಂಬ ತೀರ್ಮಾನವಾಗಿತ್ತು. ಅಲ್ಲದೇ ಅದೇ ಸಂದರ್ಭದಲ್ಲಿ ಹೋಲಿಹಬ್ಬವೂ ಇದ್ದುದರಿಂದ ಬಣ್ಣಗಳ ಮಧ್ಯದಲ್ಲಿ ತಿರುಗಾಡುವುದೂ ಕಷ್ಟದ ಮಾತಾಗಿತ್ತು. ಪ್ರಯಾಗದ ದಾರಾಗಂಜ್ ನಲ್ಲೂ ಎರಡು ದಿನಗಳ ಹೋಲಿ ಆಚರಣೆಯಿತ್ತು. ಹೋಲಿಯ ದಿನಗಳಲ್ಲಿ  ಬೆಳಗ್ಗಿನಿಂದ ಮಧ್ಯಾಹ್ನದವರೆಗೆ ಹೊರಗಡೆ ಕಾಲಿಡುವುದೇ ಕಷ್ಟ. ಸುಮಾರು ನಾಲ್ಕು ತಿಂಗಳುಗಳಿಂದ ದಾರಾಗಂಜ್ ನಲ್ಲಿ ವಾಸವಾಗಿದ್ದರಿಂದ ಅನೇಕರು ಪರಿಚಿತರಾಗಿದ್ದರು. ಅವರಿಗೆ ಕಾಣಸಿಕ್ಕಿದರೆ ಬಣ್ಣ ಎರೆಚುವುದರಲ್ಲಿ ಸಂಶಯವಿರಲಿಲ್ಲ. ಅಲ್ಲದೇ ಪಿಚಕಾರಿಗಳ ಮೂಲಕ ಮಕ್ಕಳು ಬಣ್ಣ ಎರೆಚುವಾಗ ನಮಗೂ ಬಣ್ಣದ ನೀರಿನ ಸ್ನಾನವಾಗುವುದು ನಿಶ್ಚಯವಾಗಿತ್ತು. ಹಾಗೆಂದು ಒಂದು ದಿನ ಬಣ್ಣವಾಡಿ ಬಂದರೆ ನಷ್ಟವಾಗುವುದೇನೂ ಇರಲಿಲ್ಲ. ಆದರೆ ಬಣ್ಣವಾಡುವ ಅಭ್ಯಾಸ ದಕ್ಷಿಣಭಾರತದವರಾದ ನಮಗೆ ಇಲ್ಲದ್ದರಿಂದ ಬಣ್ಣವಾಡುವ ಮನಸ್ಸಾಗಲಿಲ್ಲ. ಆದ್ದರಿಂದ ಹೋಲಿಯ ಗೋಜಿಗೇ ಹೋಗದೇ ಮಧ್ಯಾಹ್ನದ ತನಕ ರೂಮಿನಲ್ಲೇ ಕುಳಿತುಕೊಂಡು ಸಾಯಂಕಾಲ ಗಂಗಾಸ್ನಾನಕ್ಕೆ ತೆರಳಿದಾಗ ಗಂಗಾ ತೀರದಲ್ಲಿ ೫೦ ಕ್ಕಿಂತಲೂ ಹೆಚ್ಚಿನ ಗಾಳಿಪಟಗಳು ಹಾರಾಡುತ್ತಿದ್ದವು. ಹೋಲಿಹಬ್ಬದ ದಿನ ಸಾಯಂಕಾಲ ಗಾಳಿಪಟಗಳನ್ನು ಹಾರಿಸುವುದು ಇಲ್ಲಿನ ಸಂಪ್ರದಾಯ. ಅಲ್ಲದೇ ಅಕ್ಕಪಕ್ಕದ ಮನೆಗಳಿಗೆ ತೆರಳಿ ಹಿರಿಯರಿಗೆ ನಮಸ್ಕರಿಸಿ, ಸಮಾನ ವಯಸ್ಕರನ್ನು ಅಪ್ಪಿಕೊಂಡು ಹೋಲಿಯ ಶುಭಾಶಯಗಳ ವಿನಿಮಯ ಮಾಡಿಕೊಂಡು, ಹೋಲೀಹಬ್ಬದ ವಿಶೇಷ ತಿಂಡಿಗಳಾದ ಬಟಾಟೆ ಹಪ್ಪಳ ಮೊದಲಾದುವುಗಳನ್ನು ಸವಿದು ಬರುತ್ತಾರೆ. ಹೋಲಿಯ ದಿನ ದಾರಾಗಂಜ್ ನಲ್ಲೂ  ಜಾತ್ರೆಪೇಟೆ  ರಾರಾಜಿಸುತ್ತಿತ್ತು. ಹೊಸ ಬಟ್ಟೆಗಳನ್ನು ತೊಟ್ಟ ಜನರು ಜಾತ್ರೆಪೇಟೆಯಲ್ಲಿ ತಿಂದು-ಉಂಡು ಹಬ್ಬವನ್ನು ಆಚರಿಸುತ್ತಿದ್ದರು. ಮಕ್ಕಳಂತೂ ಹೊಸ ಬಟ್ಟೆಗಳನ್ನು ಸ್ನೇಹಿತರಿಗೆ ತೋರಿಸುತ್ತಾ, ಪರಸ್ಪರರಲ್ಲಿ ತಿಂಡಿಗಳನ್ನು ಹಂಚುತ್ತಾ ನಲಿದಾಡುತ್ತಿದ್ದರು. ಹೋಲಿಯೆಂಬುದು ಚಳಿಗಾಲದ ಸಮಾಪ್ತಿಯನ್ನು ಸೂಚಿಸುವುದರಿಂದ ಜ್ಯೂಸ್ ಹಾಗೂ ಲಸ್ಸಿಗಳ ಮಾರಾಟ ಹೋಲಿಯ ದಿನದಿಂದ ಆರಂಭವಾಗುತ್ತಿತ್ತು. ಹೋಲಿಯ ಉತ್ಸವದಲ್ಲಿ ನಲಿದು ಬಿಸಿಯಾಗಿದ್ದ ಜನ ಈ ಪಾನೀಯಗಳನ್ನು ಕುಡಿದು ತಂಪಾಗುತ್ತಿದ್ದರೆ ಮತ್ತೆ ಕೆಲವರು 'ಬಿಸಿ' ಪಾನೀಯವನ್ನು ಕುಡಿದು ತೂರಾಡುತ್ತಿದ್ದರು.

ನಮ್ಮ ವಿದ್ಯಾವಾರಿಧಿಯ ಷಾಣ್ಮಾಸಿಕ ಪಾಠ್ಯಕ್ರಮದ ತರಗತಿಗಳ ಮೂರನೇ ಒಂದು ಭಾಗ ಮುಕ್ತಾಯವಾಗಿತ್ತು. ಆದ್ದರಿಂದ ವಿಶೇಷ ವಿಷಯಗಳನ್ನು ಬೋಧಿಸಲು ದೇಶದ ನಾನಾ ಕಡೆಗಳಿಂದ ವಿದ್ವಾಂಸರು ಬರುತ್ತಿದ್ದರು. ಇಂತಹ ವಿದ್ವಾಂಸರು ಬಂದಾಗ ಕೆಲವೊಮ್ಮೆ ಶನಿವಾರ ಹಾಗೂ ಭಾನುವಾರ ಕೂಡಾ ತರಗತಿಗಳು ನಡೆಯುತ್ತಿದ್ದರು. ನಮ್ಮ ತರಗತಿಗಳ ಸಂಯೋಜಕರಾದ ಪ್ರೊ. ಲಲಿತ ಕುಮಾರ ತ್ರಿಪಾಠೀಯವರಂತೂ ಅತ್ಯಂತ ಚತುರ ಉಪನ್ಯಾಸಕರಾಗಿದ್ದರು. ಅವರ ಬೋಧನಾ ಶೈಲಿ ಅತ್ಯದ್ಭುತವಾಗಿತ್ತು. ಅವರು ನಮ್ಮ ತರಗತಿಗಳ ಸಂಯೋಜಕರೂ ಆಗಿದ್ದರಿಂದ ಕೇವಲ ವಿಷಯಗಳನ್ನು ಬೋಧಿಸುವುದಷ್ಟೇ ಅಲ್ಲದೇ ತರಗತಿಗಳ ಒಟ್ಟು ಉಸ್ತುವಾರಿಯನ್ನೂ ನೋಡಿಕೊಳ್ಳುತ್ತಿದ್ದರು. ನಮ್ಮ ಶೃಂಗೇರಿಯಿಂದ ಬಂದ ಆರು ವಿದ್ಯಾರ್ಥಿಗಳನ್ನು ಬಿಟ್ಟರೆ ಉಳಿದವರೆಲ್ಲರೂ ಉತ್ತರಭಾರತದವರಾಗಿದ್ದರು. ಮೊದಲೇ ಹೇಳಿದಂತೆ ಉತ್ತರ ಭಾರತದ ವಿದ್ಯಾರ್ಥಿಗಳ ನಾಲಿಗೆಯ ತುದಿಯಲ್ಲಿ ಕಾನೂನುಗಳು ನಲಿಯುತ್ತಿರುತ್ತವೆ. ರಜಾದಿನಗಳಾದ ಶನಿವಾರ- ಭಾನುವಾರಗಳಲ್ಲೂ ತರಗತಿಗಳನ್ನು ನಡೆಸುವುದು ಕಾನೂನು ಬಾಹಿರ ಎಂದು ವಿದ್ಯಾರ್ಥಿಗಳು ವಿರೋಧ ವ್ಯಕ್ತಪಡಿಸುವ ಸಾಧ್ಯತೆಗಳಿದ್ದವು. ಆದರೆ ಇಂತಹ ಸಂದರ್ಭಗಳನ್ನು ಪ್ರೊ. ಲಲಿತ್ ಕುಮಾರ್ ತ್ರಿಪಾಠೀ ಅತ್ಯಂತ ಚಾಕಚಕ್ಯತೆಯಿಂದ ನಿರ್ವಹಿಸುತ್ತಿದ್ದರು. "ಈ ವಿದ್ವಾಂಸರು ಅನೇಕ ಕಿಲೋಮೀಟರ್ ಗಳ ದೂರದಿಂದ ಇಲ್ಲಿಯ ತನಕ ಬಂದಿರುತ್ತಾರೆ. ಅವರು ಇಲ್ಲಿನ ಗೆಸ್ಟ್ ಹೌಸ್ ನಲ್ಲಿ ವಿಶ್ರಮಿಸುವುದು, ನಾನು ಹಾಗೂ ವಿದ್ಯಾರ್ಥಿಗಳಾದ ನೀವು ನಮ್ಮ ಮನೆಗಳಲ್ಲಿ ಆರಾಮಾಗಿರುವುದು ಯುಕ್ತವೇ?" ಎಂದು ಕೇಳುತ್ತಿದ್ದರು. ವಿದ್ಯಾರ್ಥಿಗಳೂ ಅನನ್ಯಗತಿಕರಾಗಿ "ಯುಕ್ತವಲ್ಲ" ಎಂದು ಉತ್ತರಿಸುತ್ತಿದ್ದರು. ಹಾಗಾದರೆ "ಶನಿವಾರ ಭಾನುವಾರಗಳಂದು ತರಗತಿಗಳಿಗೆ ಹಾಜರಾಗಬಹುದಲ್ಲವೇ" ಎಂದು ಪುನಃ ಪ್ರಶ್ನಿಸುತ್ತಿದ್ದರು. ಕಾನೂನಾತ್ಮಕವಾಗಿ ಗೆದ್ದರೂ ಭಾವನಾತ್ಮಕವಾಗಿ ಸೋತ ವಿದ್ಯಾರ್ಥಿಗಳು ಅಸಹಾಯಕರಾಗಿ ತರಗತಿಗಳಿಗೆ ಹಾಜರಾಗುತ್ತಿದ್ದರು. ಹಾಗೆಂದು ಪ್ರೊ. ಲಲಿತ್ ಕುಮಾರ್ ತ್ರಿಪಾಠಿಯವರು ಅತಿಯಾದ ನಿಯಮಗಳನ್ನು ಹೇರಿ ವಿದ್ಯಾರ್ಥಿಗಳನ್ನು ಶೋಷಿಸುತ್ತಿರಲಿಲ್ಲ. ವಿದ್ಯಾವಾರಿಧಿ ತರಗತಿಯಲ್ಲಿರುವ ವಿದ್ಯಾರ್ಥಿಗಳಲ್ಲಿ ಶೇಕಡಾ ೫೦ ರಷ್ಟು ವಿದ್ಯಾರ್ಥಿಗಳು ನನ್ನಂತೆ ತಲೆಬಿಸಿ, ಜವಾಬ್ದಾರಿಗಳನ್ನು ಹೊಂದಿರದವರಾಗಿದ್ದರೂ ಉಳಿದ ಶೇಕಡಾ ೫೦ ರಷ್ಟು ವಿದ್ಯಾರ್ಥಿಗಳಿಗೆ ಕುಟುಂಬವನ್ನು ನಿರ್ವಹಿಸುವ ಜವಾಬ್ದಾರಿ ಹಾಗೂ ಅನೇಕ ಸಮಸ್ಯೆಗಳಿದ್ದವು. ಅಲ್ಲದೇ ಎಂ.ಎ, ಬಿ.ಎಡ್ ಗಳನ್ನು ಮುಗಿಸಿದ್ದ ವಿದ್ಯಾರ್ಥಿಗಳಲ್ಲಿ

ವಿದ್ಯಾವಾರಿಧಿ ಪದವಿ ಪಡೆಯದೆಯೂ ಜೀವನವನ್ನು ಸಾಗಿಸುತ್ತೇವೆ ಎಂಬ ಧಾರ್ಷ್ಟ್ಯವಿತ್ತು. ಆದ್ದರಿಂದ ಇಂತಹ ವಿದ್ಯಾರ್ಥಿಗಳನ್ನು ಹದ್ದುಬಸ್ತಿನಲ್ಲಿಟ್ಟು ತರಗತಿಗಳನ್ನು ನಡೆಸುವುದರಲ್ಲಿ ತ್ರಿಪಾಠಿಯವರ ದಕ್ಷತೆ ಅಪಾರವಾಗಿತ್ತು. ತಾಯಿ ಹುಲಿ ಬಾಯಿಯಲ್ಲಿ ತನ್ನ ಮರಿಗಳನ್ನು ಕಚ್ಚಿ ಹಿಡಿಯುವಂತೆ ಅತಿಯಾದ ನಿಯಮಗಳನ್ನೂ ಹೇರದೇ ಅತಿಯಾದ ಸಡಿಲಿಕೆಯೂ ಇಲ್ಲದೇ ತರಗತಿಗಳನ್ನು ನಡೆಸುತ್ತಿದ್ದರು. ಪ್ರೊ. ಲಲಿತ ಕುಮಾರ ತ್ರಿಪಾಠಿಯವರ ಇಂತಹ ಅನೇಕ ವ್ಯವಹಾರಗಳನ್ನುಕಂಡ ನನಗೆ 'ಕಾಲೇಜಿನ ಉಪನ್ಯಾಸಕರೆಂದರೆ ಹೀಗಿರಬೇಕು' ಎಂಬ ಆದರ್ಶ ಭಾವ ಮೂಡಿತ್ತು.

ಮಾರ್ಚ್ ತಿಂಗಳ ೧೭-೧೮ ರಂದು ಯುಗಾದಿಯಾಗಿದ್ದರಿಂದ ಶನಿವಾರ-ಭಾನುವಾರಗಳಂದು ತರಗತಿಗಳಿರಲಿಲ್ಲ. ಆದ್ದರಿಂದ ಅಯೋಧ್ಯೆಯ ದರ್ಶನ ಮಾಡಿ ಬರುವುದೆಂದು ನಿಶ್ಚಯಿಸಿದೆವು. ಶನಿವಾರ ಬೆಳಗ್ಗೆ ೪.೩೦ ಕ್ಕೆ ಅಲಹಾಬಾದ್ ಜಂಕ್ಷನ್ ನಿಂದ ಹೊರಡುವ ರೈಲು ೯.೨೦ ಕ್ಕೆ ಅಯೋಧ್ಯೆಯನ್ನು ತಲುಪುತ್ತದೆ ಎಂದು ರಿಸರ್ವೇಶನ್ ಮಾಡಿಸಿದೆವು. ಬೆಳಗಿನ ಜಾವ ರೈಲ್ವೇ ಸ್ಟೇಶನ್ ಗೆ ತೆರಳಲು ಮನೋಜ ಎಂಬುವವನ ಇ-ರಿಕ್ಷಾ ಬುಕ್ ಮಾಡಿದೆ. ಪ್ರಯಾಗಕ್ಕೆ ಬಂದು ತರಗತಿಗಳು ಆರಂಭವಾದ ನಂತರ ಸುಮಾರು ಎರಡು ತಿಂಗಳುಗಳ ಕಾಲ ಮನೋಜನ ಇ-ರಿಕ್ಷಾದಲ್ಲೇ ಪ್ರತಿದಿನವೂ ವಿದ್ಯಾಪೀಠಕ್ಕೆ ಹೋಗುತ್ತಿದ್ದರಿಂದ ಆತನ ಸ್ವಭಾವದ ಬಗ್ಗೆ ಚೆನ್ನಾಗಿಯೇ ಅರಿವಿತ್ತು. ಆಲಸ್ಯವೇ ಮೂರ್ತಿವೆತ್ತು ಬಂದಂತೆ ಅವನಿದ್ದ. ಆತನ ಅಣ್ಣ ಸಣ್ಣ ಕ್ಯಾಂಟೀನೊಂದನ್ನು ನಡೆಸುತ್ತಿದ್ದ. ಈತ ಬಾಡಿಗೆಗೆ ಜನ ಸಿಕ್ಕಿದರೆ ರಿಕ್ಷಾ ಓಡಿಸುತ್ತಿದ್ದ. ಹಾಗೆಂದು ವಂಚನೆಯ ಬುದ್ಧಿ ಇವನದಾಗಿರಲಿಲ್ಲ. ನಾವು ಪ್ರತಿದಿನ ವಿದ್ಯಾಪೀಠಕ್ಕೆ ಹೊರಡುವ ಹತ್ತು ನಿಮಿಷಕ್ಕೂ ಮುನ್ನ ಆತನ ಅಣ್ಣನಿಗೆ ಫೋನಾಯಿಸುತ್ತಿದ್ದೆವು. ಏಕೆಂದರೆ ಮನೋಜ ಇಂದಿನ ೪ಜಿ ಯುಗದಲ್ಲೂ ಮೊಬೈಲನ್ನು ತನ್ನ ಬಳಿ ಇಟ್ಟುಕೊಂಡು ಕರೆಗಳಿಗೆ ಪ್ರತಿಕ್ರಿಯಿಸುತ್ತಿರಲಿಲ್ಲ. ನಮ್ಮ ಫೋನ್ ಬಂದಾಗ ಅಣ್ಣ ಆತನನ್ನು ಬಡಿದೆಬ್ಬಿಸುತ್ತಿದ್ದ. ಹಾಸಿಗೆಯಿಂದ ಎದ್ದ ಮನೋಜ ಮುಖವನ್ನು ತೊಳೆಯದಿದ್ದರೂ ನಾವು ಹೊರಟಾಗ ರಿಕ್ಷಾವನ್ನು ಒರೆಸುತ್ತಾ ಇರುತ್ತಿದ್ದ. ಹಾಗೆಂದು ಇತರೆ ರಿಕ್ಷಾ ಚಾಲಕರಂತೆ ದುಡ್ಡಿಗಾಗಿ, ಪ್ರಯಾಣಿಕರಿಗಾಗಿ ಹಪಹಪಿಸುತ್ತಿರಲಿಲ್ಲ. 'ಪ್ರಯಾಣಿಕರು ಸಿಕ್ಕರೆ ರಿಕ್ಷಾ ಓಡಿಸಿ ನಾಲ್ಕು ಕಾಸು ಸಂಪಾದಿಸುತ್ತೇನೆ. ಇಲ್ಲವಾದರೆ ಮನೆಯಲ್ಲಿ ಸುಖವಾಗಿ ನಿದ್ರಿಸುತ್ತೇನೆ' ಎಂಬ ತೃಪ್ತ ಭಾವ ಆತನದಾಗಿತ್ತು. ಇ-ರಿಕ್ಷಾಕ್ಕಿಂತ ಶೇರ್ ಆಟೋದಲ್ಲಿ ವಿದ್ಯಾಪೀಠಕ್ಕೆ ಹೋಗುವುದೇ ಲಾಭದಾಯಕ ಎಂದು ತಿಳಿದ ನಂತರ ಆತನ ಇ-ರಿಕ್ಷಾದಲ್ಲಿ ಹೋಗುವುದನ್ನು ನಿಲ್ಲಿಸಿದರೂ ಆತನಿಗೆ ನಮ್ಮ ಮೇಲೆ

ಬೇಸರವಿರಲಿಲ್ಲ. ಆತನ ಅಣ್ಣನಿಗೇ ಸ್ವಲ್ಪ ಮಟ್ಟಿಗೆ ಅಸಮಾಧಾನವಿತ್ತು. ಅಲ್ಲದೇ ನಾವು ನಡೆದುಕೊಂಡು ಬರುತ್ತಿರುವಾಗ ಆತನ ರಿಕ್ಷಾ ಖಾಲಿ ಇದ್ದರೆ ಉಚಿತವಾಗಿ ನಮ್ಮನ್ನು ಕರೆದು ತರುತ್ತಿದ್ದ. ಹೀಗೆ ಒಳ್ಳೆಯ ಮನುಷ್ಯನಾದರೂ ಆತನ ಆಲಸ್ಯದ ಸ್ವಭಾವವನ್ನು ಅರಿತಿದ್ದ ನಾನು ೪.೦೦ ಗಂಟೆಗೆ ರೈಲು ಹೊರಡುತ್ತದೆ. ೩.೧೫ ಕ್ಕೆ ಇಲ್ಲಿಂದ ಹೊರಡೋಣ. ಮೊಬೈಲನ್ನು ಹತ್ತಿರದಲ್ಲಿಟ್ಟುಕೊಂಡೇ ಮಲಗು ಫೋನ್ ಮಾಡಿ ಎಬ್ಬಿಸುತ್ತೇನೆ. ಎಂದು ನಾಲ್ಕೈದು ಬಾರಿ ಒತ್ತಿ ಒತ್ತಿ ಹೇಳಿದ್ದೆ.

ಸಾಧ್ಯವಾದಷ್ಟು ದಿನ ಗಂಗಾಸ್ನಾನ ಮಾಡಬೇಕು ಎಂದು ಸಂಕಲ್ಪಿಸಿದ್ದ ನನಗೆ ಅಯೋಧ್ಯೆಗೆ ಹೊರಟ ದಿನವೂ ಗಂಗಾಸ್ನಾನವನ್ನು ಬಿಡುವ ಮನಸ್ಸಾಗಲಿಲ್ಲ. ೩.೧೫ ಕ್ಕೆ ಹೊರಡಬೇಕಾದ್ದರಿಂದ ಮಧ್ಯರಾತ್ರಿ ೨.೧೫ಕ್ಕೇ ಎದ್ದು ಗಂಗಾತೀರದತ್ತ ಒಬ್ಬಂಟಿಯಾಗಿ ನಡೆಯಲಾರಂಭಿಸಿದೆ. ನಡುರಾತ್ರಿಯಲ್ಲಿ ಬೀದಿಯಲ್ಲಿ ನಡೆಯುತ್ತಿದ್ದ ನನ್ನನ್ನು ಕಂಡ ಬೀದಿನಾಯಿಗಳು ರಸ್ತೆಯ ಇಕ್ಕೆಲಗಳಲ್ಲೂ ನಿಂತು ಬೊಗಳುತ್ತಿದ್ದವು. ಗಂಗಾತೀರದಲ್ಲಿ ಯಾತ್ರಾರ್ಥಿಗಳ ಬಟ್ಟೆಗಳನ್ನು ಇಡಲೆಂದು ನಿರ್ಮಿಸಿದ್ದ ಮರದ ಮಂಚಗಳಲ್ಲಿ ಅನೇಕರು ಮಲಗಿಕೊಂಡಿದ್ದರು. ಆದರೂ ಬೀದಿದೀಪಗಳಿಂದ ಗಂಗಾತೀರ ಶೋಭಿಸುತ್ತಿದ್ದುದರಿಂದ ಕೃಷ್ಣಪಕ್ಷದ ಚತುರ್ದಶೀಯ ಕಗ್ಗತ್ತಲೆಯ ಅನುಭವವಾಗಲಿಲ್ಲ. ಸ್ನಾನ ಮುಗಿಸಿ ಹಿಂದಿರುಗುವಾಗ ನಾಯಿಗಳು ಬೊಗಳುವುದನ್ನು ನಿಲ್ಲಿಸಿದ್ದವು. ರೂಮಿಗೆ ಬರುತ್ತಿದ್ದಂತೆ "ನಾವು ಹೋಗಬೇಕಾಗಿದ್ದ ರೈಲು ೪.೩೦ ಕ್ಕೆ ಬದಲಾಗಿ ೭.೦೦ ಗಂಟೆಗೆ ಹೊರಡುವುದೆಂದು ಮೆಸೇಜ್ ಬಂದಿದೆ" ಎಂದು ತಿಳಿಸಿದ. ಹಾಗಾದರೆ ೬.೦೦ ಗಂಟೆಗೆ ಹೊರಡುವುದೆಂದು  ರಿಕ್ಷಾದ ಮನೋಜನಿಗೆ ನಾಲ್ಕೈದು ಬಾರಿ ಫೋನ್ ಮಾಡಿದರೂ ರಿಸೀವ್ ಮಾಡಲಿಲ್ಲ. ಪ್ರತಿದಿನದಂತೆ ಮೊಬೈಲನ್ನು ಎಲ್ಲೋ ಇಟ್ಟು ಮಲಗಿರಬಹುದು ಅಥವಾ ಗಾಢ ನಿದ್ರೆಯಲ್ಲಿರುವವನಿಗೆ ಮೊಬೈಲ್ ಧ್ವನಿ ಕೇಳಿರಲಿಕ್ಕಿಲ್ಲ ಎಂದುಕೊಂಡೆವು. ಬಹುಶಃ ೪.೩೦ ಕ್ಕೇ ರೈಲು ಹೊರಟಿದ್ದರೆ ನಾವು ರೈಲು ನಿಲ್ದಾಣವನ್ನು ತಲುಪುವುದು ಕಷ್ಟಸಾಧ್ಯವಾಗಿತ್ತು. ನಮ್ಮ ಈ ಸ್ಥಿತಿಯನ್ನು ಊಹಿಸಿದ ಭಗವಂತನೇ ರೈಲಿನ ಸಮಯದಲ್ಲಿ ವ್ಯತ್ಯಯ ಮಾಡಿರಬೇಕು.

೬.೦೦ ಗಂಟೆಗೆ ಶೇರ್ ಆಟೋವೊಂದರಲ್ಲಿ ರೈಲು ನಿಲ್ದಾಣಕ್ಕೆ ಹೊರಟೆವು. ೭.೦೦ ಗಂಟೆಗೆ ಬರಬೇಕಾಗಿದ್ದ ರೈಲು ೭.೪೫ ಕ್ಕೆ ನಿಲ್ದಾಣವನ್ನು ತಲುಪಿತು. ಸಮಯದ ವ್ಯತ್ಯಾಸವಾದ್ದರಿಂದ ಅಲ್ಲಲ್ಲ ಕ್ರಾಸಿಂಗ್ ಗೆ ನಿಲ್ಲುತ್ತಾ ಮಂದವಾಗಿ ಸಾಗುತ್ತಿತ್ತು. ಜನಸಂದಣಿಯಿಲ್ಲದೇ ರೈಲು ಖಾಲಿಯಾಗಿತ್ತು. ಆದ್ದರಿಂದ ಸುಖವಾಗಿ ೨.೦೦ ಗಂಟೆಯ ವೇಳೆಗೆ ಅಯೋಧ್ಯೆಯನ್ನುತಲುಪಿದೆವು. ಅಯೋಧ್ಯೆಯಲ್ಲಿ ಸರಯೂ ನದೀ ತೀರದ

ನಯಾಘಾಟ್ ನಲ್ಲಿ ಕಾಲೇರಾಮ ಮಂದಿರವಿದೆ. ಈ ಮಂದಿರದ ಟ್ರಸ್ಟಿಗಳಲ್ಲಿ ಪ್ರಯಾಗದ ಉತ್ತರಾದಿ ಮಠದ ಮುಖ್ಯಸ್ಥರಾದ ರಾಘವೇಂದ್ರ ಆಚಾರ್ ಕೂಡಾ ಒಬ್ಬರು. ಆದ್ದರಿಂದ ನಮ್ಮ ಊಟ ವಸತಿಗಳ ವ್ಯವಸ್ಥೆಯನ್ನು ಮಾಡುವಂತೆ ಕಾಲೇರಾಮ ಮಂದಿರದಲ್ಲಿ ಸೂಚಿಸಿದ್ದರು. ಮಹಾರಾಷ್ಟ್ರ ಮೂಲದ ಸಂಸ್ಥೆಯೊಂದು ನಡೆಸುವ ಈ ಮಂದಿರದಲ್ಲಿ ಮಧ್ಯಾಹ್ನದ ಊಟವನ್ನು ಮುಗಿಸಿ ರಾಮಜನ್ಮಭೂಮಿಯ ದರ್ಶನಕ್ಕೆ ತೆರಳಿದೆವು. ಜನ್ಮಭೂಮಿಯ ಆವರಣ ಸಮೀಪಿಸುತ್ತಿದ್ದಂತೆ ಪೋಲೀಸ್ ಹಾಗೂ ಸೈನಿಕರ ಹಿಂಡನ್ನು ಕಂಡೆವು. ತ್ರಿಪುರಾದ ರಾಜಧಾನಿ ಅಗರ್ತಲಾಕ್ಕೆ ಹೋಗಿದ್ದಾಗ ಭಾರತ- ಬಾಂಗ್ಲಾ ಗಡಿಯಲ್ಲಿ ಕಂಡಿದ್ದ ದೃಶ್ಯವನ್ನು ಮನಸ್ಸು ಮತ್ತೊಮ್ಮೆ ಮೆಲುಕು ಹಾಕಿತು. ಮೊಬೈಲ್, ವಾಚ್ ಮುಂತಾದ ಎಲೆಕ್ಟ್ರಾನಿಕ್ ಐಟಮ್ ಗಳನ್ನು ಕ್ಲಾಕ್ ರೂಮ್ ನ ಒಳಗಿಟ್ಟು ರಾಮಜನ್ಮಭೂಮಿಯತ್ತ ನಡೆಯಲಾರಂಭಿಸಿದೆವು. ಅರ್ಧ ಕಿ.ಮೀ ದೂರದ ಹಾದಿ ಕಬ್ಬಿಣದ ಸರಳುಗಳ ಬೇಲಿಯಿಂದ ಆವೃತವಾಗಿತ್ತು. ಸುಮಾರು ಐದು ಕಡೆಗಳಲ್ಲಿ ಪೋಲೀಸರು ಸರ್ವಾಂಗ ತಪಾಸಣೆಯನ್ನು ನಡೆಸಿದರು. ಟೆಂಟ್ ಒಂದರಲ್ಲಿ ರಾಮ-ಲಕ್ಷ್ಮಣ-ಭರತ ಶತ್ರುಘ್ನರ ವಿಗ್ರಹಗಳು ಕಂಡಾಗ "ಇದೇ ರಾಮಾದಿಗಳ ಜನ್ಮಸ್ಥಳ" ಎಂದು ಕಾವಲು ಕಾಯುತ್ತಿದ್ದ ಪೋಲೀಸ್ ತಿಳಿಸಿದ. ಅದನ್ನು ಕಂಡ ನಮಗೆ ನಮ್ಮ ಯಕ್ಷಗಾನ ಮೇಳದ ಡೇರೆಗಳಲ್ಲಿರುವ ದೇವರನ್ನು ರಾಮಜನ್ಮಭೂಮಿಯಲ್ಲಿರುವ ರಾಮನಿಗಿಂತ ವೈಭವೋಪೇತವಾಗಿ ಅಲಂಕರಿಸಿರುತ್ತಾರೆ. ಎಂದೆನಿಸಿತು. ನಮ್ಮ ಮುಂದೆ ಸನ್ಯಾಸಿಯೊಬ್ಬರು ಗಟ್ಟಿಯಾಗಿ 'ಜೈ ಶ್ರೀರಾಮ್' ಎಂದು ಕೂಗುತ್ತಾ ನಡೆಯುತ್ತಿದ್ದರು. ಕಾವಲು ಕಾಯುತ್ತಿದ್ದ ಪೋಲೀಸರೂ ಕೂಡಾ ರಾಮನಾಮವನ್ನು ಗುನುಗುತ್ತಾ ಕರ್ತವ್ಯ ನಿರ್ವಹಿಸುತ್ತಿದ್ದರು. ಹೀಗೆ ಪೋಲೀಸ್, ಸೈನ್ಯ ಹಾಗೂ ಕಬ್ಬಿಣದ ಸರಳುಗಳಿಂದ ಅಲಂಕೃತವಾಗಿದ್ದ ರಾಮಜನ್ಮಭೂಮಿಯನ್ನು ಕಂಡು ಕಾರಾಗೃಹದಲ್ಲಿ ಹುಟ್ಟಿದ್ದು ರಾಮನೋ ಅಥವಾ ಕೃಷ್ಣನೋ ಎಂಬ ಸಂದೇಹವುಂಟಾಯಿತು.

ಅಲ್ಲಿಂದ ಮುಂದೆ ಸಮೀಪದಲ್ಲಿನ ಕನಕಭವನವನ್ನು ಹೊಕ್ಕೆವು. ಶ್ರೀರಾಮಚಂದ್ರ ತನ್ನ ಅಂತ್ಯಕಾಲದಲ್ಲಿ ತನ್ನ ಹಾಗೂ ತಮ್ಮಂದಿರ ಒಟ್ಟು ಎಂಟು ಮಕ್ಕಳಿಗೆ ೮ ನಗರಗಳ ಆಡಳಿತವನ್ನು ವಹಿಸುತ್ತಾನೆ. ಎಲ್ಲರೂ ವಿಭಿನ್ನ ನಗರಗಳಿಗೆ ತೆರಳಿದ್ದರಿಂದ ಅಯೋಧ್ಯೆ ಪಾಳುಬಿದ್ದಿತ್ತು. ಇದರಿಂದ ನೊಂದ ಅಯೋಧ್ಯೆಯ ನಗರಾಧಿದೇವತೆ ಕುಶನ ಬಳಿ ಬಂದು ಪುನಃ ಅಯೋಧ್ಯೆಯನ್ನು ಉದ್ಧರಿಸುವಂತೆ ಕೇಳಿಕೊಳ್ಳುತ್ತಾಳೆ. ಕುಶಾವತಿಯಿಂದ ಅಯೋಧ್ಯೆಗೆ ಆಗಮಿಸಿದ ಕುಶ ಅಯೋಧ್ಯೆಯ ವೈಭವವನ್ನು ಮರಳಿ ಪ್ರತಿಷ್ಠಾಪಿಸುತ್ತಾನೆ. ಎಂಬ ಕತೆ ಕಾಲಿದಾಸನ ರಘುವಂಶ

ಮಹಾಕಾವ್ಯದಲ್ಲಿ ವರ್ಣಿತವಾಗಿದೆ. ಹೀಗೆ ನವೀಕರಿಸಿದ ನಗರದಲ್ಲಿ ಕಲಿಯುಗದ ಕಾಲದವರೆಗೂ ಉಳಿದಿದ್ದ ಈ ಕನಕಭವನ ಸಮುದ್ರಗುಪ್ತನಿಂದ ಪುನಃ ನವೀಕರಣಗೊಂಡಿತ್ತು. ಶತ್ರುಗಳಿಂದ ಮತ್ತೊಮ್ಮೆ ಧ್ವಂಸಗೊಂಡ ಈ ಭವನವನ್ನು ಮಹಾರಾಣೀ ವೃಷಭಾನೂ ಕುವರೀ ೧೯೪೪ಲರಲ್ಲಿ ದುರಸ್ತಿಗೊಳಿಸಿದ್ದಳು. ಈ ಭವನವನ್ನು ಕಂಡಾಗ ರಾಜಸಭೆ ನಡೆಯುತ್ತಿದ್ದ ಸ್ಥಳದಂತೆ ತೋರುತ್ತದೆ. ಕನಕಭವನದ ದರ್ಶನದ ನಂತರ ರಾಜಗದ್ದೀ ಹಾಗೂ ಹನುಮಾನ್ ಗಡೀ ಮಂದಿರಗಳಿಗೆ ತೆರಳಿದೆವು. ಬಹುಶಃ ರಾಮಜನ್ಮಭೂಮಿಯ ಅತಿಯಾದ ಭದ್ರತೆಯಿಂದ ಬೇಸತ್ತ ಸ್ಥಳೀಯ ಜನರು ಹನುಮಾನ್ ಗಡೀ ಮಂದಿರಕ್ಕೆ ಬರುತ್ತಾರೆ ಎಂದೆನಿಸುತ್ತದೆ. ಮಂದಿರ ಸ್ಥಳೀಯ ಭಕ್ತರಿಂದ ತುಂಬಿ ತುಳುಕುತ್ತಿತ್ತು. ಮಂದಿರದಲ್ಲಿ ರಾಮಚರಿತಮಾನಸದ ಪಾರಾಯಣವೂ ನಡೆಯುತ್ತಿತ್ತು. ಆಂಜನೇಯನ ದರ್ಶನವನ್ನು ಪಡೆದು ಸುಮಾರು ೨ ಕಿ.ಮೀ ದೂರದಲ್ಲಿರುವ ಕಾರಸೇವಾಪುರದತ್ತ ಹೆಜ್ಜೆಯಿತ್ತೆವು. ಕಾರಸೇವಾಪುರದಲ್ಲಿ ರಾಮಮಂದಿರವನ್ನು ಪುನಃ ನಿರ್ಮಿಸಲು ಬೇಕಾದ ಕಲ್ಲು ಹಾಗೂ ಇಟ್ಟಿಗೆಗಳನ್ನು ಸಂಗ್ರಹಿಸಿ ಇಡಲಾಗಿದೆ. ಕಲ್ಲಿನ ಕುಸುರಿ ಕೆಲಸವೂ ಪೂರ್ಣಗೊಂಡಿದ್ದು ರಾಮಜನ್ಮಭೂಮಿಯ ಸ್ಥಳದಲ್ಲಿ ಅವುಗಳನ್ನು ಜೋಡಿಸುವ ಕೆಲಸವಷ್ಟೇ ಬಾಕಿ ಉಳಿದಿದೆ. ಮರದಿಂದ ನಿರ್ಮಿಸಿದ ರಾಮಮಂದಿರದ ಸಣ್ಣ ಪ್ರತಿಕೃತಿಯನ್ನೂ ಇಡಲಾಗಿದೆ. ರಾಮಮಂದಿರದ ಅಂಗವಾಗಿ ಯಾವಾಗ ಧನ್ಯತೆಯನ್ನು ಪಡೆಯುತ್ತೇವೆಯೋ ಎಂಬ ಕಾತರಯಿಂದ ಕಲ್ಲುಗಳು ಬಿಸಿಲು ಚಳಿ ಮಳೆಗಳಿಗೆ ಮೈಯೊಡ್ಡಿ ನಿಂತಿರುವಂತೆ ಭಾಸವಾಗುತ್ತಿತ್ತು. ಇಷ್ಟನ್ನು ಸಂದರ್ಶಿಸಿದಾಗಲೇ ಕತ್ತಲಾಗಿದ್ದರಿಂದ ಕಾಲೇರಾಮ ಮಂದಿರಕ್ಕೆ ತೆರಳಿ ಸುಖನಿದ್ರೆಗೆ ಜಾರಿದೆವು.

ಮರುದಿನ ಮುಂಜಾನೆ ಸರಯೂ ನದಿಯಲ್ಲಿ ನಾನು ಹಾಗೂ ರವಿಶಂಕರ ಸ್ನಾನ ಮಾಡಿದೆವು. ಮತ್ತೊಮ್ಮೆ ರಾಮಜನ್ಮಭೂಮಿಯ ದರ್ಶನವನ್ನು ಮಾಡಬೇಕೆಂದೆನಿಸಿತು. ಆದ್ದರಿಂದ ಮತ್ತೊಮ್ಮೆ ಹನುಮಾನ್ ಗಡೀ ಹಾಗೂ ರಾಮಜನ್ಮಭೂಮಿಯ ದರ್ಶನವನ್ನು ಪಡೆದು ಬಂದೆವು. ಬೆಳಗಿನ ಜಾವದಲ್ಲಿ ದರ್ಶನಕ್ಕೆ ತೆರಳಿದ್ದರಿಂದ ಭಕ್ತರ ಸಂಖ್ಯೆ ಕಡಿಮೆಯಾಗಿತ್ತು. ಆದ್ದರಿಂದ ಎಲ್ಲೆಂದರಲ್ಲಿ ಪೋಲೀಸರು, ಸೈನಿಕರು ಹಾಗೂ ಕೋತಿಗಳನ್ನೇ ಕಾಣಬಹುದಾಗಿತ್ತು. ನಾವು ದರ್ಶನವನ್ನು ಪೂರೈಸಿ ಬಂದಾಗ ಉಳಿದ ಸ್ನೇಹಿತರೂ ಸ್ನಾನಾದಿಗಳನ್ನು ಮುಗಿಸಿದ್ದರು. ಇ-ರಿಕ್ಷಾವೊಂದನ್ನು ಬುಕ್ ಮಾಡಿ ಸುಮಾರು ೨೫ ಕಿಮೀ ದೂರವಿರುವ ನಂದೀಗ್ರಾಮದ ದರ್ಶನಕ್ಕೆ ಹೊರಟೆವು. ನಂದಿಗ್ರಾಮದಲ್ಲಿ ಶ್ರೀರಾಮನ ವನವಾಸದ ಸಂದರ್ಭದಲ್ಲಿ ಭರತ

ವಾಸವಾಗಿದ್ದಸ್ಥಳ, ಧ್ಯಾನಕ್ಕೆ ಕುಳಿತುಕೊಳ್ಳುತ್ತಿದ್ದ ಆಲದ ಮರ, ೨೭ ತೀರ್ಥಗಳಿರುವ ಬಾವಿ, ಭರತ ಹಾಗೂ ಹನುಮಂತರ ಭೇಟಿಯಾದ ಸ್ಥಳಗಳನ್ನು ಸಂದರ್ಶಿಸಿದೆವು. ಇ-ರಿಕ್ಷಾದಲ್ಲಿ ಹೋದುದರಿಂದ ಸುಮಾರು ಮೂರು ಗಂಟೆಗಳ ಅವಧಿ ನಂದೀಗ್ರಾಮಕ್ಕೆ ಹೋಗಿ ಬರುವುದರಲ್ಲೇ ಕಳೆಯಿತು. ಯುಗಾದಿಯ ದಿನವಾಗಿದ್ದರಿಂದ ಕಾಲೇ ರಾಮ ಮಂದಿರದಲ್ಲಿ 'ಗುಡಿ ಪಾಡಿವಾ'ದ ವಿಶೇಷ ಸಿಹಿ ಊಟವಿತ್ತು. ೩.೩೦ ಕ್ಕೆ ಫೈಜಾಬಾದ್ ಜಂಕ್ಷನ್ ನಿಂದ ಪ್ರಯಾಗಕ್ಕೆ ರೈಲು ಇದ್ದುದರಿಂದ ಊಟ ಮಾಡಿದ ತಕ್ಷಣ ಹೊರಟು ರಾತ್ರೆ ೧೦.೦೦ ಗಂಟೆಗೆ ಪ್ರಯಾಗದ ನಮ್ಮ ರೂಮಿಗೆ ತಲುಪಿದೆವು.

ಅದೃಷ್ಟಕ್ಕೆ ೨೪-೨೫ ರ ಶನಿವಾರ ಭಾನುವಾರಗಳಂದೂ ರಜೆಯಿತ್ತು. ಈ ಬಾರಿ ಪುನಃ ಕಾಶಿಗೆ ಹೋಗುವುದೆಂದು ತೀರ್ಮಾನಿಸಿದೆವು. ಶುಕ್ರವಾರ ಮುಂಜಾನೆಯೇ ಶನಿವಾರ-ಭಾನುವಾರಗಳಂದು ತರಗತಿಗಳು ನಡೆಯುವುದಿಲ್ಲವೆಂಬ ಸೂಚನೆ ದೊರೆತುದರಿಂದ ಮಧ್ಯಾಹ್ನವೇ ಕಾಶಿಗೆ ಹೋಗುವ ಯೋಚನೆ ಹಾಕಿಕೊಂಡೆ. ಕಾಶಿಯಲ್ಲಿ ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಆಯುರ್ವೇದ ವಿಭಾಗದ ಪ್ರೊಫೆಸರ್, ಕಿಶೋರ್ ಪಟವರ್ಧನ್ ಅವರ ಮನೆಗೆ ಹೋಗುವುದೆಂದು ತೀರ್ಮಾನಿಸಿದೆ. ಮೂಲತಃ ಉಜಿರೆಯ ಸಮೀಪದ ಮುಂಡಾಜೆಯವರಾಗಿದ್ದ ಕಿಶೋರ್ ಪಟವರ್ಧನ್ ಬೆಳ್ತಂಗಡಿಯ ಅಷ್ಟಾವಧಾನದಲ್ಲಿ ಭೇಟಿಯಾಗಿದ್ದರು. ಶುಕ್ರವಾರ ಮಧ್ಯಾಹ್ನ ತರಗತಿಗಳು ಮುಗಿದ ತಕ್ಷಣ ಕಿಶೋರ್ ಪಟವರ್ಧನ್ ಅವರಿಗೆ ಫೋನಾಯಿಸಿದೆ. "ಅವಶ್ಯವಾಗಿ ನಮ್ಮ ಮನೆಗೆ ಬರಬೇಕು. ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಮುಖ್ಯದ್ವಾರದ ಬಳಿಗೆ ಬಂದು ನನಗೆ ಫೋನ್ ಮಾಡು. ಇವತ್ತು ನಮ್ಮ ಡಿಪಾರ್ಟ್ಮೆಂಟ್ ನಲ್ಲಿ ಕಾನ್ಫರೆನ್ಸ್ ನಡೆಯುತ್ತಿದೆ. ಸಭೆಯಲ್ಲಿರುತ್ತೇನೆ. ನೀನು ಬಂದ ತಕ್ಷಣ ನಾನು ನಿನ್ನನ್ನು ಮನೆಗೆ ಕರೆದೊಯ್ಯುತ್ತೇನೆ". ಎಂದು ತಿಳಿಸಿದರು. "ಕಾನ್ಫರೆನ್ಸ್ ನಲ್ಲಿದ್ದೇನೆ" ಎಂದು ಅವರು ಹೇಳಿದಾಗ ಬ್ಯುಸಿ ಇರುತ್ತಾರೆಯೇನೋ ಎಂದು ಯೋಚಿಸಿದೆ. ಆದರೆ ನೈಮಿತ್ತಿಕ ಕರ್ಮಗಳಾಗಬೇಕಾಗಿದ್ದ ಕಾನ್ಫರೆನ್ಸ್, ಸೆಮಿನಾರ್, ವರ್ಕ್ ಶಾಪ್ ಮುಂತಾದುವುಗಳು ಸಣ್ಣ ಸಣ್ಣ ವಿಶ್ವವಿದ್ಯಾಲಯಗಳಲ್ಲೇ ನಿತ್ಯಕರ್ಮಗಳಂತೆ ನಡೆಯುತ್ತಿರುವ ಈ ದಿನಗಳಲ್ಲಿ ದೇಶದ ಪ್ರತಿಷ್ಠಿತ ವಿದ್ಯಾಸಂಸ್ಥೆಗಳಲ್ಲೊಂದಾದ ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಕಾನ್ಫರೆನ್ಸ್ ಔಪಚಾರಿಕವಾಗಿರಬಹುದು ಎಂದು ಯೋಚಿಸಿದೆ. ಫೋನಿನಲ್ಲಿ ಕೇಳಿದ್ದ ಕಿಶೋರ್ ಪಟವರ್ಧನ್ ಅವರ ಮಾತಿನ ಶೈಲಿಯೂ ನನ್ನ ಅಭಿಪ್ರಾಯವನ್ನು ಪುಷ್ಟೀಕರಿಸುವಂತಿತ್ತು. ತಕ್ಷಣವೇ ವಿದ್ಯಾಲಯದ ಸಮೀಪದಲ್ಲಿದ್ದ ಸಿವಿಲ್ ಲೈನ್ ಬಸ್ ಸ್ಟ್ಯಾಂಡ್ ನಿಂದ ವಾರಾಣಸಿಯ ಬಸ್ಸನ್ನೇರಿ ಟ್ರಾಫಿಕ್ ಜಾಮ್ ನ

ನಡುವೆಯೂ ಸಂಜೆ ೬ ಗಂಟೆಗೆ ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಮುಖ್ಯದ್ವಾರವನ್ನು ತಲುಪಿದೆ. ಫೋನ್ ಮಾಡಿದ ತಕ್ಷಣ ಕಿಶೋರ್ ಪಟವರ್ಧನ್ ನನ್ನನ್ನು ವಿಶ್ವವಿದ್ಯಾಲಯದ ಆವರಣದಲ್ಲಿರುವ ಅವರ ಮನೆಗೆ ಕರೆದೊಯ್ದರು. ಅವರ ಪತ್ನಿಯೂ ಖಾಸಗಿ ಕ್ಲಿನಿಕ್ ನಡೆಸುತ್ತಿದ್ದರು. ಅವರ ಮಕ್ಕಳಿಬ್ಬರೂ ಚಿತ್ಪಾವನೀ ಭಾಷೆಯನ್ನು ಸೊಗಸಾಗಿ ಮಾತನಾಡುತ್ತಿದ್ದರು. ಮಗನ ಮಾತಿನಲ್ಲಿ ಉತ್ತರಭಾರತದ ಮಾತಿನ ಶೈಲಿ ಸ್ಫುಟವಾಗಿ ಗೋಚರವಾಗುತ್ತಿತ್ತು. ಗಂಡ ಹೆಂಡತಿ ಇಬ್ಬರೂ ಕೆಲಸದಲ್ಲಿದ್ದೂ, ಮಕ್ಕಳಿಗೆ ಸ್ಥಳೀಯ ಜನರ ಸಂಪರ್ಕ ಅಧಿಕವಾಗಿದ್ದರೂ ಮಕ್ಕಳಿಗೆ ಮಾತೃಭಾಷೆಯನ್ನು ಕಲಿಸಿದ್ದನ್ನು ಕಂಡು ಸಂತಸವಾಯಿತು. ದೂರದ ವಾರಾಣಾಸಿಯಲ್ಲೂ ಊರಿನ ವಿಷಯಗಳನ್ನು ಹರಟುತ್ತಾ ಅವರ ಮನೆಯಲ್ಲೇ ರಾತ್ರೆ ವಸತಿಯೂ ಆಯಿತು.

ನನ್ನ ಮಿತ್ರರೂ ಸಾಯಂಕಾಲ ೫ ಗಂಟೆಯ ಸುಮಾರಿಗೆ ಪ್ರಯಾಗದಿಂದ ವಾರಾಣಸಿಯ ಬಸ್ ಹತ್ತಿದ್ದರೂ ಟ್ರಾಫಿಕ್ ಜಾಮ್ ನ ಕಾರಣದಿಂದಾಗಿ ವಾರಾಣಸಿಯನ್ನು ತಲುಪುವಾಗ ರಾತ್ರೆ ೧೦ ಗಂಟೆಯಾಗಿತ್ತು. ವಿದ್ಯಾವಾರಿಧಿ ತರಗತಿಯಲ್ಲಿ ನಮ್ಮ ಸಹಪಾಠಿಯಾಗಿರುವ ಜಮ್ಮು ಕಾಶ್ಮೀರದ ಪುರಾತನ ಶರ್ಮಾ ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಹಳೆ ವಿದ್ಯಾರ್ಥಿಯಾಗಿದ್ದ. ಆತ ವಾರಾಣಸಿಯ ಆಶ್ರಮವೊಂದರಲ್ಲಿ ವಾಸಿಸುತ್ತಿದ್ದ. ನಾವು ಆತನ ಆಶ್ರಮದಲ್ಲೇ ಎರಡು ದಿನಗಳ ಮಟ್ಟಿಗೆ ವಾಸಿಸುವುದೆಂದು ನಿರ್ಣಯಿಸಿದ್ದೆವು. ಪ್ರಯಾಗದಿಂದ ಬಂದ ನನ್ನ ಮಿತ್ರರು ಗಂಗಾನದಿಯ 'ರಾಮಘಾಟ್' ನ ಬಳಿಯಲ್ಲಿ 'ಮೇಧಾಕಿನ್' ಎಂಬ ಸ್ಥಳದಲ್ಲಿರುವ ಆತನ ಆಶ್ರಮಕ್ಕೆ ತೆರಳಿದ್ದರು. ನಾನು ಮರುದಿನ ೧೦ ಗಂಟೆಗೆ ಅವರನ್ನು ಸೇರಿಕೊಳ್ಳುವುದೆಂದು ನಿರ್ಣಯವಾಗಿತ್ತು. ಮರುದಿನ ಕಾಶಿಯ ದುರ್ಗಮವಾದ ಗಲ್ಲಿಗಳಲ್ಲಿ ದಾರಿತಪ್ಪಿ ತೊಂದರೆಗೊಳಗಾಗಬಾರದೆಂದು ಗಂಗಾನದೀಯ ಘಾಟ್(ಸ್ನಾನಘಟ್ಟ)ಗಳಲ್ಲಿ ನಡೆದು ರಾಮ್ ಘಾಟ್ ತಲುಪಿದೆ. ನನಗೆ ಆಶ್ರಮದ ದಾರಿ ತೋರಿಸಲು ಬಂದಿದ್ದ ಮಿತ್ರರ ಕೈಯಲ್ಲಿ ಚೀಲವನ್ನಿತ್ತು ಗಂಗಾಸ್ನಾನವನ್ನೂ ಮುಗಿಸಿದೆ. ಆಶ್ರಮದಿಂದ ಮಿತ್ರರೊಂದಿಗೆ ವಿಶ್ವನಾಥನ ದರ್ಶನಕ್ಕೆಂದು ತೆರಳಿದಾಗ ಉದ್ದವಾದ ಸರತಿ ಸಾಲು ಕಂಡಿತು. ಮೊದಲಿಗೆ ಚೌಖಾಂಬಾದ ಪುಸ್ತಕ ಮಳಿಗೆಗೆ ತೆರಳಿ ನಂತರ ವಿಶ್ವನಾಥನ ದರ್ಶನ ಮಾಡುವುದೆಂದು ತೀರ್ಮಾನಿಸಿದೆವು. ಕಳೆದ ಬಾರಿ ಬಂದಾಗಲೇ ನಾನು ಪುಸ್ತಕಗಳನ್ನು ಖರೀದಿಸಿದ್ದರಿಂದ ಪುನಃ ಪುಸ್ತಕಗಳನ್ನು ಕೊಳ್ಳುವ ಯೋಜನೆ ಇರಲಿಲ್ಲ. ಆದರೆ ಮಿತ್ರರು ಪುಸ್ತಕಗಳನ್ನು ಕೊಳ್ಳುವ ಯೋಜನೆ ಹಾಕಿದ್ದರಿಂದ ಅವರೊಂದಿಗೆ ಮಳಿಗೆಗೆ ತೆರಳಿದೆ. ಪುಸ್ತಕಗಳನ್ನು

ನೋಡಿದ ತಕ್ಷಣ ಕೊಳ್ಳುಬಾಕತನದಿಂದ ನಾಲ್ಕೈದು ಪುಸ್ತಕಗಳನ್ನು ಖರೀದಿಸಿದೆ. ಗೆಳೆಯ ಗಣೇಶಪ್ರಸಾದನ "ಪುಸ್ತಕಗಳನ್ನು ಕೊಂಡುಕೊಂಡರೆ ನನ್ನ ಪುಸ್ತಕಗಳೊಂದಿಗೆ ಶೃಂಗೇರಿಗೆ ಕಳುಹಿಸಬಹುದು" ಎಂಬ ಮಾತು ನನ್ನ ಕೊಳ್ಳುಬಾಕತನಕ್ಕೆ ಪೂರಕವಾಯಿತು. ಪುಸ್ತಕಗಳನ್ನು ಕೂಲಂಕಷವಾಗಿ ನೋಡಿ ಖರೀದಿಸುವುದರೊಳಗಾಗಿ ೨ ಗಂಟೆಯಾಗಿ ಹೊಟ್ಟೆ ಚುರುಗುಟ್ಟುತ್ತಿತ್ತು. ವಿಶ್ವನಾಥಮಂದಿರದ ಸಮೀಪದಲ್ಲಿನ ಅನ್ನಪೂರ್ಣಾ ಛತ್ರದಲ್ಲಿ ಅನ್ನ-ದಾಲ್-ಪಲ್ಯ-ಮಜ್ಜಿಗೆಗಳನ್ನು ಉಂಡೆವು. ಛತ್ರದಿಂದ ಹಿಂದಿರುಗುವಾಗ ವಿಶ್ವನಾಥನ ದರ್ಶನದ ಸರತಿಸಾಲು ಕರಗಿತ್ತು.

ವಿಶ್ವನಾಥನ ದರ್ಶನಕ್ಕೆ ತೆರಳುವಾಗ ಮೊಬೈಲ್, ವಾಚ್ ಮೊದಲಾದ ಇಲೆಕ್ಟ್ರಿಕ್ ಸಾಧನಗಳನ್ನು ಕೊಂಡೊಯ್ಯುವಂತಿರಲಿಲ್ಲ. ಹಾಗೆಂದು ದೇವಾಲಯದ ವತಿಯಿಂದ ಕ್ಲಾಕ್ ರೂಮ್ ಕೂಡಾ ಇರಲಿಲ್ಲ. ಖಾಸಗಿ ಕ್ಲಾಕ್ ರೂಮ್ ನ ಶುಲ್ಕ ದುಬಾರಿಯಾಗಿತ್ತು. ಹೀಗಾಗಿ ಮೊದಲಿಗೆ ಮೂವರು ದರ್ಶನಕ್ಕೆ ಹೊರಟರು. ಅವರು ವಾಪಾಸ್ಸಾದ ನಂತರ ಉಳಿದಿಬ್ಬರು ನಮ್ಮ ಇಲೆಕ್ಟ್ರಾನಿಕ್ ಸಾಮಾಗ್ರಿಗಳನ್ನು ತೆಗೆದಿಟ್ಟು ದರ್ಶನಕ್ಕಾಗಿ ತೆರಳಿದೆವು. ದೇಶದ ಪ್ರಮುಖ ಶ್ರದ್ಧಾಕೇಂದ್ರವಾದ ವಾರಾಣಸಿಯಲ್ಲಿ ಯಾರ ಸಹಾಯವೂ ಇಲ್ಲದೇ ಕೇವಲ ೧೦ ನಿಮಿಷಗಳಲ್ಲಿ ವಿಶ್ವನಾಥನ ದರ್ಶನವಾಯಿತು. ಕಾಶಿಯಲ್ಲೇ ಇಷ್ಟು ಸುಲಭವಾಗಿ ದರ್ಶನವಾಗುವಾಗ ಧರ್ಮಸ್ಥಳ, ಸುಬ್ರಹ್ಮಣ್ಯ, ತಿರುಪತಿ ಮೊದಲಾದ ಕಡೆಗಳಲ್ಲಿ ದರ್ಶನಕ್ಕಾಗಿ ಗಂಟೆಗಟ್ಟಲೆ ಕಾಯುವ ಪರಿಸ್ಥಿತಿಯಿದೆಯಲ್ಲ ಎಂದು ಆಶ್ಚರ್ಯವಾಯಿತು. ಕಳೆದ ಬಾರಿ ಕಾಶಿಗೆ ತೆರಳಿದ್ದಾಗ ಚಿಂತಾಮಣಿ ಭಟ್ಟರು ಕಳುಹಿಸಿದ್ದ ಮಾಣಿ ಎಲ್ಲ ದೇವಾಲಯಗಳಲ್ಲೂ ಅವಸರಾವಸರವಾಗಿ ದರ್ಶನ ಮಾಡಿಸಿದ್ದ. ಆದರೆ ಈ ಬಾರಿ ಸ್ವತಂತ್ರವಾಗಿ ಹೋಗಿದ್ದರಿಂದ ದೇವಾಲಯದ ಪರಿಸರವನ್ನು ವಿಸ್ತಾರವಾಗಿ ನೋಡುವ ಅವಕಾಶ ದೊರೆಯಿತು. ವಿಶ್ವನಾಥ ಮಂದಿರದ ಪರಿಸರದಲ್ಲಿರುವ ಅನೇಕ ಲಿಂಗಗಳ ದರ್ಶನವನ್ನು ಮಾಡಿದೆವು. ಔರಂಗಜೇಬ ದೇವಾಲಯವನ್ನು ಒಡೆದು ಕಟ್ಟಿಸಿದ ಮಸೀದಿಯ ಕಡೆಗೆ ಮುಖ ಮಾಡಿರುವ ನಂದಿ, ಔರಂಗಜೇಬನ ಆಕ್ರಮಣದ ಸಂದರ್ಭದಲ್ಲಿ ವಿಶ್ವನಾಥಲಿಂಗವನ್ನು ಬಚ್ಚಿಟ್ಟಿದ್ದ ಜ್ಞಾನವಾಪೀ ಬಾವಿ ಮುಂತಾದುವುಗಳ ದರ್ಶನವೂ ಆಯಿತು. ದೇಶವನ್ನು ರಕ್ಷಿಸುವ ಸೈನಿಕನ ಸ್ಥಾನದಲ್ಲಿರುವುದಕ್ಕೆ ಆನಂದವನ್ನೂ, ಮಸೀದಿಯನ್ನು ಕಾಯುವ ಕ್ಷುದ್ರ ಕೆಲಸದಲ್ಲಿ ನಿಯೋಜಿತರಾದುದಕ್ಕಾಗಿ ದುಗುಡವನ್ನೂ ಮನಸ್ಸಿನಲ್ಲಿ ಹೊತ್ತುಕೊಂಡ ಸೈನಿಕರು , ಕೈಯಲ್ಲಿ ಬಂದೂಕನ್ನು ಹೊತ್ತುಕೊಂಡು ಮಸೀದಿಯನ್ನು ಕಾಯುತ್ತಿದ್ದರು.

ವಿಶ್ವನಾಥಮಂದಿರದ ದರ್ಶನವಾದ ನಂತರ ಕಾಶಿಯ ಗಲ್ಲಿಗಳಲ್ಲಿ ತಿರುಗಾಟ ಆರಂಭವಾಯಿತು. ಗೆಳೆಯನಾದ ಗಣೇಶ ತಬಲಾ ವಾದಕನಾದ್ದರಿಂದ ಸಂಗೀತೋಪಕರಣಗಳ ಅಂಗಡಿಯೊಂದನ್ನು ಹೊಕ್ಕಿದ. ವಿಶಿಷ್ಟವಾದ ಬನಾರಸ್ ಮುಚ್ಚಿಗೆಯಿರುವ ತಬಲಾವನ್ನು ಕೂಲಂಕಷವಾಗಿ ಪರಿಶೀಲಿಸಿ, ಫೋನ್ ನ ಮೂಲಕ ತಜ್ಞರ ಅಭಿಪ್ರಾಯವನ್ನೂ ಕೇಳಿ ತಬಲಾ ಖರೀದಿಸುವಷ್ಟರಲ್ಲಿ ಗಂಗಾರತಿಯ ಸಮಯವಾಗಿತ್ತು. ದಶಾಶ್ವಮೇಧಘಾಟ್ ನಲ್ಲಿ ಗಂಗಾರತಿಯನ್ನು ವೀಕ್ಷಿಸಲು ೫೦೦೦ ಕ್ಕೂ ಹೆಚ್ಚಿನ ಜನ ಜಮಾಯಿಸಿದ್ದರು. ಗಂಗಾರತಿಯನ್ನು ವೀಕ್ಷಿಸಿ, ಖರೀದಿಸಿದ ತಬಲಾವನ್ನು ಹೊತ್ತುಕೊಂಡು ಆಶ್ರಮದತ್ತ ಹೊರಟೆವು. 'ಕಾಶಿಯ ಗಲ್ಲಿಗಳಲ್ಲಿ ನಡೆದರೆ ಖಂಡಿತವಾಗಿ ದಾರಿತಪ್ಪಿ ತಬಲಾ ಹೊತ್ತುಕೊಂಡು ಅಲೆಯಬೇಕಾಗುತ್ತದೆ. ಆದ್ದರಿಂದ ಸ್ನಾನಘಟ್ಟಗಳಲ್ಲೇ ನಡೆದು ರಾಮ್ ಘಾಟ್ ತಲುಪಿದರೆ ಸಮೀಪದ ಆಶ್ರಮವನ್ನು ಸುಲಭವಾಗಿ ಸೇರಬಹುದು' ಎಂದೆನಿಸಿತು. ಆದರೆ ತಬಲಾದ ಅಂಗಡಿ ಕಾಶೀ ಪೇಟೆಯ ಮಧ್ಯದ ಚೌಕ್ ಎಂಬ ಸ್ಥಳದಲ್ಲಿತ್ತು. ಅಲ್ಲಿಂದ ಘಾಟ್ ಗೆ ತೆರಳುವ ದಾರಿ ಯಾವುದೆಂದು ಯೋಚಿಸುತ್ತಿದ್ದ ನಮಗೆ ಮಾರ್ಗದರ್ಶಕನ ಸ್ಥಾನದಲ್ಲಿ ಹೆಣವೊಂದು ದೊರೆಯಿತು. ಹೆಣಗಳನ್ನು ಮಣಿಕರ್ಣಿಕಾ ಘಾಟ್ ಗೆ ಒಯ್ಯುತ್ತಾರೆ ಎಂಬ ವಿಷಯ ಎರಡು ಬಾರಿಯ ಕಾಶಿ ಭೇಟಿಯಿಂದ ತಿಳಿದಿತ್ತು. ಹೆಣವನ್ನು ಹಿಂಬಾಲಿಸುತ್ತಾ ಮಣಿಕರ್ಣಿಕಾ ಘಾಟ್ ತಲುಪಿ, ಗಂಗಾತೀರದಲ್ಲಿ ರಾಮ್ ಘಾಟ್ ನ ವರೆಗೂ ನಡೆದು, ಸಮೀಪದಲ್ಲಿದ್ದ ಆಶ್ರಮವನ್ನು ತಲುಪಿದೆವು.

ಮರುದಿನ ಮುಂಜಾನೆ ೬ ಗಂಟೆಗೆ ಗಂಗಾಸ್ನಾನ ಮಾಡಿ ಮತ್ತೊಮ್ಮೆ ವಿಶ್ವನಾಥನ ದರ್ಶನವನ್ನುಮಾಡಿದೆವು. ಅಲ್ಲಿಂದ ಕಾಲಭೈರವ ಮಂದಿರಕ್ಕೆ ತೆರಳಿ ಕಾಶಿನೂಲುಗಳನ್ನು ಕೊಂಡುಕೊಂಡೆವು. ಆಶ್ರಮದಲ್ಲಿ ತಿಂಡಿ ಮುಗಿಸಿ ಕಾಶಿಯಿಂದ ೧೦ ಕಿ.ಮೀ ದೂರದ ಸಾರಾನಾಥಕ್ಕೆ ಹೊರಟೆವು. ಸಾರಾನಾಥದಲ್ಲಿ ಬೌದ್ಧಮಂದಿರವಿದೆ. ಹಾಗೆಯೇ ಉತ್ಖನನದ ಸಮಯದಲ್ಲಿ ದೊರೆತ ಮೌರ್ಯರ ಕಾಲದ ಅನೇಕ ವಸ್ತುಗಳನ್ನು ಮ್ಯೂಸಿಯಂನಲ್ಲಿ ಸಂಗ್ರಹಿಸಿಡಲಾಗಿದೆ. ಭಾರತದ ರಾಷ್ಟ್ರಲಾಂಛನವಾದ ಅಶೋಕಸ್ತಂಭದ ನಾಲ್ಕು ಸಿಂಹಗಳು, ಅಶೋಕಚಕ್ರ, ಸ್ತೂಪ ಮೊದಲಾದ ಐತಿಹಾಸಿಕ ಸ್ಮಾರಕಗಳನ್ನು ಕಂಡು ವಾರಾಣಾಸೀಗೆ ಮರಳಿದೆವು. ಶೃಂಗೇರಿಯ ವಿದ್ಯಾಪೀಠದಲ್ಲಿ ಜ್ಯೋತಿಷ ಪ್ರಾಧ್ಯಾಪಕರಾಗಿದ್ದ ಕಾಶಿಯ ಅನಿರುದ್ಧ ಕುಮಾರ ಶುಕ್ಲ, ಕಾಶಿಯ ಸಿಹಿ ತಿಂಡಿಗಳನ್ನು ಸದಾ ಹೊಗಳುತ್ತಿದ್ದುದು ನೆನಪಾಯಿತು. ಪ್ರಸ್ತುತ ಮುಂಬೈಯಲ್ಲಿ ಉಪನ್ಯಾಸಕರಾಗಿರುವ ಅವರಿಗೆ ಫೋನಾಯಿಸಿ ತಿಂಡಿಗಳ ಹೆಸರುಗಳನ್ನು ಕೇಳಿದೆ. ಅವರ

ಸೂಚನೆಯಂತೆ ರಸ್ ಮಲಾಯಿ, ಖೀರ್ ಮೋಹನ್, ಛೇಣಿ, ರಸಗುಲ್ಲಾ, ಮುಂತಾದ ಸಿಹಿತಿಂಡಿಗಳನ್ನು ಸವಿದು, ಊಟದ ಶಾಸ್ತ್ರವನ್ನೂ ಪೂರೈಸಿ, ಸಂಜೆ ೪ ಗಂಟೆಯ ವೇಳೆಗೆ ಪ್ರಯಾಗದ ರೈಲನ್ನು ಹತ್ತಿದೆವು.

ಆರು ತಿಂಗಳ ಪ್ರಯಾಗ ವಾಸದ ಅವಧಿಯಲ್ಲೇ ವಿದೇಶಪ್ರಯಾಣವನ್ನೂ ಮಾಡಿಬಿಡಬೇಕು ಎಂಬ ನಿರ್ಣಯ ಊರಿನಿಂದ ಹೊರಡುವಾಗಲೇ ದೃಢವಾಗಿತ್ತು. ಕಳೆದ ವರ್ಷ ಪ್ರಯಾಗದಲ್ಲಿದ್ದ ಸ್ನೇಹಿತರು ಕೂಡಾ ನೇಪಾಳ ಪ್ರವಾಸವನ್ನು ಮಾಡಿದ್ದರಿಂದ ನಮ್ಮ ಉತ್ಸಾಹವೂ ಇಮ್ಮಡಿಯಾಗಿತ್ತು. ದೂರದೂರಿಗೆ ತೆರಳುವುದೆಂದರೆ, ಅದರಲ್ಲೂ ಮೊಬೈಲ್ ಫೋನ್ ನಿಷ್ಕ್ರಿಯವಾಗಿರುವ ಜಾಗಕ್ಕೆ ತೆರಳುವುದೆಂದರೆ ಸಣ್ಣ ಆತಂಕವಿರುವುದು ಸಹಜ. ಮುರಳೀಕೃಷ್ಣ ಕಾಠ್ಮಂಡೌನ ಪಶುಪತಿನಾಥ ದೇವಾಲಯದ ಅರ್ಚಕರಾದ ಶ್ರೀರಾಮ ಕಾರಂತರ ಸಂಪರ್ಕ ಸಾಧಿಸಿದ್ದ. ವಾಟ್ಸ್ ಆ್ಯಪ್ ನ ವಾಯ್ಸ್ ಮೆಸೇಜ್ ನ ಮೂಲಕ ನಿರಂತರವಾಗಿ ಅವರೊಂದಿಗೆ ಪ್ರಯಾಣದ ಬಗೆಗೆ ಮಾತುಕತೆ ನಡೆಯುತ್ತಿತ್ತು. ಮಹಾವೀರ ಜಯಂತಿ, ಗುಡ್ ಫ್ರೈಡೇ, ಶನಿವಾರ, ಭಾನುವಾರಗಳು ಮಾರ್ಚ್ ೨೯ ರಿಂದ ಏಪ್ರಿಲ್ ೨ ರ ವರೆಗೆ ಇದ್ದುದರಿಂದ ಮಾರ್ಚ್೨೮ರ ಬುಧವಾರ ರಾತ್ರೆಯೇ ಗೋರಖ್ ಪುರಕ್ಕೆ ರಿಸರ್ವೇಶನ್ ಮಾಡಿಸಿದ್ದೆವು. ಗೋರಖ್ ಪುರದಲ್ಲಿ ನಮ್ಮ ವಿದ್ಯಾಪೀಠದ ಹಿರಿಯ ವಿದ್ಯಾರ್ಥಿ ವಿನಯಕಿರಣ ದೆಹಲಿಯಿಂದ ಬಂದು ನಮ್ಮೊಂದಿಗೆ ಸೇರಿಕೊಳ್ಳುವುದೆಂದು ನಿರ್ಣಯವಾಗಿತ್ತು. ಸಂಗೀತ ನಾಟ್ಯಾದಿಗಳಲ್ಲಿ ಪ್ರವೀಣನಾಗಿರುವ ವಿನಯಕಿರಣನೊಂದಿಗೆ ಕಾಲೇಜು ದಿನಗಳಲ್ಲಿ ಉತ್ತಮವಾದ ಒಡನಾಟವಿತ್ತು. ಹೀಗಾಗಿ ನಮ್ಮೊಂದಿಗೆ ನೇಪಾಳಕ್ಕೆ ಹೊರಡಲು ಆತನೂ ಅಣಿಯಾಗಿದ್ದ. ಮುಂಜಾನೆ ೯ ಗಂಟೆಗೆ ಗೋರಖ್ ಪುರವನ್ನು ತಲುಪಿದೆವು. ಪ್ರಸ್ತುತ ಉತ್ತರಪ್ರದೇಶದ ಮುಖ್ಯಮಂತ್ರಿಯಾಗಿರುವ ಯೋಗೀ ಆದಿತ್ಯನಾಥ್ ಪೀಠಾಧ್ಯಕ್ಷರಾಗಿರುವ ಗೋರಖ್ ನಾಥ್ ಮಂದಿರ ತೆರಳಿ ಸ್ನಾನಾದಿಗಳನ್ನು ಮುಗಿಸಿದೆವು. ಗೀತಾಪ್ರೆಸ್ ನ ಮಂದಿರಕ್ಕೂ ಗೀತಾಪ್ರೆಸ್ ಪ್ರಕಾಶನದ ಮಳಿಗೆಗೂ ತೆರಳಿದೆವು. ಗೀತಾಪ್ರೆಸ್ ನ ಮಂದಿರದಲ್ಲಿ ರಾಮಾಯಣ ಮಹಾಭಾರತ ಪುರಾಣಾದಿಗಳ ಅನೇಕ ಘಟನೆಗಳನ್ನು ಚಿತ್ರಪಟಗಳಲ್ಲಿ ಚಿತ್ರಿಸಿ ಸುಂದರವಾಗಿ ಜೋಡಿಸಲಾಗಿದೆ. ಹಾಗೆಯೇ ಇಡಿಯ ಭಗವದ್ಗೀತೆಯನ್ನು ಗೋಡೆಯ ಸುತ್ತಲೂ ಅಮೃತಶಿಲೆಯಲ್ಲಿ ಕೆತ್ತಲಾಗಿದೆ. ಗೀತಾಪ್ರೆಸ್ ನಲ್ಲಿ ಮುದ್ರಣಕ್ಕಾಗಿ ಬಳಸಲಾದ ಮೊದಲ ಯಂತ್ರ ಹಾಗೂ ಸುಮಾರು ಒಂದು ಡಿವಿಡಿ ಡ್ರೈವ್ ನಷ್ಟು ಸುತ್ತಳತೆಯ ವೃತ್ತದಲ್ಲಿ ಅತಿ ಸಣ್ಣ ಅಕ್ಷರಗಳಲ್ಲಿ ಬರೆದಿಟ್ಟಂತಹ ಭಗವದ್ಗೀತೆಯೇ ಮೊದಲಾದ ವಿಶಿಷ್ಟ ವಸ್ತುಗಳನ್ನು ಸಂಗ್ರಹಿಸಿಡಲಾಗಿದೆ. ಪ್ರಕಾಶನದಲ್ಲಿ ವಿವಿಧ ಭಾಷೆಯ ಪುಸ್ತಕಗಳನ್ನು ಕಾಣಬಹುದು.

ಸ್ಫುಟವಾಗಿ, ತಪ್ಪುಗಳಿಲ್ಲದೇ ಮುದ್ರಿತವಾಗಿರುವ ಗೀತಾಪ್ರೆಸ್ ಗೋರಖ್ ಪುರ ಪ್ರಕಾಶನದ ಪುಸ್ತಕಗಳು ದೇಶದೆಲ್ಲೆಡೆಯಲ್ಲೂ ಲಭ್ಯವಾಗಿರುವುದರಿಂದ ಪುಸ್ತಕಗಳನ್ನು ಖರೀದಿಸಲಿಲ್ಲ. ಗೀತಾಪ್ರೆಸ್ ನಿಂದ ಮಂದಿರಕ್ಕೆ ಮರಳಿದಾಗ ವಿನಯಕಿರಣನೂ ಮಂದಿರವನ್ನು ತಲುಪಿದ್ದ. ಎಲ್ಲರೂ ಒಟ್ಟಾಗಿ ಗೋರಕ್ಷನಾಥ ಮಂದಿರದ ದರ್ಶನವನ್ನೂ ಮಾಡಿದೆವು. ನಾಥ ಸಂಪ್ರದಾಯದ ಮಂದಿರವಾದ್ದರಿಂದ ಮಂದಿರ ಹಾಗೂ ಮಂದಿರದ ಪರಿಸರ ಕರ್ನಾಟಕದ ಆದಿಚುಂಚನಗಿರಿ ಮಠದಂತೆಯೇ ಇತ್ತು. ಮಠದಲ್ಲಿ ಅನೇಕ ಸಂತರ ಸಮಾಧಿಗಳೂ ಪ್ರತಿಷ್ಠಾಪಿಸಲ್ಪಟ್ಟಿದ್ದವು.

ಮಧ್ಯಾಹ್ನ ಮಠದ ಪರಿಸರದಲ್ಲೇ ರಿಯಾಯಿತಿ ದರದಲ್ಲಿ ದೊರೆಯುವ ಊಟವನ್ನು ಉಂಡೆವು. ನಂತರ ಭಾರತದ ಗಡಿನಾಡಾದ ಸೋನೌಲೀಗೆ ಬಸ್ಸನ್ನೇರಿದೆವು. ಎಲ್ಲಿಗೇ ಹೋದರೂ ಬಸ್ ವ್ಯವಸ್ಥೆಯ ಗೋಳು ಪ್ರಯಾಣಿಕರನ್ನು ಕಾಡದೇ ಇರುವುದಿಲ್ಲ. ನಾವು ಪ್ರಯಾಣಿಸುವ ಊರಿಗೆ ಯಥೇಷ್ಟವಾಗಿ ಬಸ್ಸುಗಳಿದ್ದರೂ ನಮಗೆ ಅವಶ್ಯಕತೆಯಿರುವಾಗ ಬಸ್ಸು ಲಭ್ಯವಾಗುವುದಿಲ್ಲ. ಸೋನೌಲೀಗೆ ತೆರಳಲು ಅನೇಕ ಸರಕಾರಿ ಬಸ್ಸುಗಳಿದ್ದರೂ ನಾವು ಹೊರಟ ಹೊತ್ತಿಗೆ ಬಸ್ಸಿರಲಿಲ್ಲ. ಅನಿವಾರ್ಯವಾಗಿ ಖಾಸಗಿ ಬಸ್ಸನ್ನೇರಿದೆವು. ಬಸ್ಸಿನ ಟಾಪ್ ನಲ್ಲಿ ನೇಪಾಳಕ್ಕೆ ರಫ್ತಾಗಬೇಕಾದ ಲಗೇಜ್ ಹೇರಿದ್ದರು. ಗೋರಖ್ ಪುರದಿಂದ ಸೋನೌಲಿಗೆ ಹೋಗುವ ಮಾರ್ಗದಲ್ಲಿನ ಎಲ್ಲ ಪೇಟೆಗಳೂ ಸಣ್ಣ ಊರುಗಳಾಗಿದ್ದವು. ಈ ಮಾರ್ಗ ಉಡುಪಿ ಮಂಗಳೂರು ಹೈವೇಯನ್ನು ನೆನಪಿಸಿತು. ಉಡುಪಿ ಮಂಗಳೂರು ಹೈವೆಯಲ್ಲಿನ ಮುಲ್ಕಿ, ಪಡುಬಿದ್ರೆ, ಸುರತ್ಕಲ್ ಮುಂತಾದ ಊರುಗಳಲ್ಲಿ ಗಗನಚುಂಬಿ  ಕಾಂಪ್ಲೆಕ್ಸ್ ಗಳನ್ನು ಕಾಣಬಹುದು. ಆದರೆ ಗೋರಖ್ ಪುರದಿಂದ ಸೋನೌಲೀ ರಸ್ತೆಯ ಬದಿಗಳಲ್ಲಿ ಸಣ್ಣ ಸಣ್ಣ ಪೇಟೆಗಳು ವಿಶಾಲವಾಗಿ ಹರಡಿದ್ದವು. ನಮ್ಮ ಬಸ್ ಕೂಡಾ ಕೆಲವು ಲಗೇಜ್ ಗಳನ್ನು ಅಲ್ಲಲ್ಲಿ ಇಳಿಸುತ್ತಿತ್ತು. ಹೀಗಾಗಿ ೧೦೦ ಕಿ.ಮೀ ಮಾರ್ಗವನ್ನು ೪ ಗಂಟೆಗಳಲ್ಲಿ ಕ್ರಮಿಸಿ, ಸಂಜೆ ೬.೩೦ ರ ಸುಮಾರಿಗೆ ಸೋನೌಲೀ ತಲುಪಿದೆವು. ದೇಶಗಳ ಗಡಿ ಭೌಗೋಳಿಕವಾಗಿ ಬೇರ್ಪಟ್ಟಿದ್ದರೂ ಭಾರತಕ್ಕೂ ನೇಪಾಳಕ್ಕೂ ಹೆಚ್ಚಿನ ವ್ಯತ್ಯಾಸವಿಲ್ಲ ಎಂಬುವುದನ್ನು ಕೇಳಿ ತಿಳಿದಿದ್ದೆ. ಸೋನೌಲೀ ಪೇಟೆಯಲ್ಲಿ ಅದರ ಪ್ರತ್ಯಕ್ಷ ಅನುಭವವಾಯಿತು. ಜನರು ನೇಪಾಳಿ ಹಾಗೂ ಹಿಂದೀ ಭಾಷೆಗಳೆರಡರಲ್ಲೂ ವ್ಯವಹರಿಸುತ್ತಿದ್ದರು. ಸೋನೌಲೀ ಪೇಟೆಯಲ್ಲಿ ನೇಪಾಳಿ ಕರೆನ್ಸಿ ಹಾಗೂ ಭಾರತದ ಕರೆನ್ಸಿಗಳೆರಡೂ ಮಾನ್ಯವಾಗಿದ್ದವು. ಭಾರತದ ೧ ರೂಪಾಯಿಯೆಂದರೆ ನೇಪಾಳದ ೧.೬ ರೂಗಳು. ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ ಭಾರತದ ೧೦೦ ನೇಪಾಳದ ೧೬೦, ಭಾರತದ ೫೦೦ ನೇಪಾಳದ ೮೦೦

ರೂಪಾಯಿಗಳು. ಇಡಿಯ ನೇಪಾಳದಲ್ಲಿ ಭಾರತದ ನೋಟುಗಳನ್ನು ಸ್ವೀಕರಿಸುತ್ತಾರಾದರೂ ವಸ್ತುಗಳ ಮೌಲ್ಯವನ್ನು ನೇಪಾಳಿ ಕರೆನ್ಸಿಯಲ್ಲೇ ಹೇಳುತ್ತಾರೆ. ಬಿಸ್ಕೇಟ್, ಜ್ಯೂಸ್ ಮೊದಲಾದ ವಸ್ತುಗಳನ್ನು ಖರೀದಿಸುವಾಗ ನೇಪಾಳಿ ಕರೆನ್ಸಿ ೧೫, ೨೦ ರೂಪಾಯಿಗಳಾದರೆ ತಕ್ಷಣವೇ ಭಾರತದ ಕರೆನ್ಸಿಗೆ ಬದಲಾಯಿಸಿ ೯.೩೭೫, ೧೨.೫ ರೂಪಾಯಿಗಳನ್ನು ಕೊಡುವುದು ವ್ಯಾವಹಾರಿಕವಾಗಿ ಕಷ್ಟಸಾಧ್ಯ. ನೇಪಾಳದ ವ್ಯಾಪಾರಿಗಳು ಎರಡೂ ಬಗೆಯ ಕರೆನ್ಸಿಗಳಲ್ಲಿ ಲೀಲಾಜಾಲವಾಗಿ ವ್ಯವಹರಿಸುತ್ತಾರೆ. ಆದರೆ ಮೊದಲ ಬಾರಿ ನೇಪಾಳಕ್ಕೆ ಹೋಗುತ್ತಿರುವ ನಾವು ಅಂಗಡಿಗಳಲ್ಲಿ ಕ್ಯಾಲ್ಯುಕ್ಯುಲೇಟರ್ ಹಿಡಿದುಕೊಂಡು ಪರದಾಡಬೇಕಾಗಬಹುದು ಎಂದುಕೊಂಡು ಗಡಿಯಲ್ಲೇ ಒಂದಷ್ಟು ಹಣವನ್ನು ನೇಪಾಳಿ ಹಣವಾಗಿ ಬದಲಾಯಿಸಿಕೊಂಡೆವು. ರಾತ್ರೆಯ ಊಟವಾದ ಬಳಿಕ ೮.೧೫ ರ ಸುಮಾರಿಗೆ ಕಾಠ್ಮಂಡೌನತ್ತ ಬಸ್ ಪ್ರಯಾಣ ಆರಂಭವಾಯಿತು. ಇಡಿಯ ನೇಪಾಳದಲ್ಲಿ ರೈಲ್ವೇ ವ್ಯವಸ್ಥೆ ಇಲ್ಲವಾದ್ದರಿಂದ ಬಸ್ ಪ್ರಯಾಣ ಅನಿವಾರ್ಯವಾಗಿತ್ತು. ಹಿಂದಿನ ರಾತ್ರೆಯಿಂದಲೇ ಪ್ರಯಾಣ ಮಾಡುತ್ತಾ ಬಳಲಿದ್ದ ನಾವು ಬಸ್ಸಿನಲ್ಲಿ ನಿದ್ರೆಗೆ ಜಾರಿದ್ದೆವು. ಮಧ್ಯರಾತ್ರೆ ೧೨ ಗಂಟೆಯ ಸುಮಾರಿಗೆ ಬಸ್ ನಿಲ್ಲಿಸಿದಾಗ ಇಳಿದು ನೋಡಿದರೆ ನೇಪಾಳದ ಪರಿಸರ ನೂರಕ್ಕೆ ನೂರು ಭಾರತದಂತೆಯೇ ಭಾಸವಾಯಿತು. ಪುನಃ ಬಸ್ಸನ್ನೇರಿ ಕಾಠ್ಮಂಡೌನತ್ತ ಪ್ರಯಾಣ ಮುಂದುವರೆಸಿದೆವು. ಕಾಠ್ಮಂಡೌ ನಗರ ನಾಲ್ಕು ಕಡೆಗಳಿಂದಲೂ ಪರ್ವತಗಳಿಂದ ಆವೃತವಾದ್ದರಿಂದ ಘಾಟ್ ಸೆಕ್ಷನ್ ನಲ್ಲಿ ಪ್ರಯಾಣ ಮಾಡಬೇಕಾಗಿತ್ತು. ಮಾರ್ಗದಲ್ಲಿ ಟ್ರಾಫಿಕ್ ಜಾಮ್ ನಿಂದಾಗಿ ಬಸ್ಸು ನಿಧಾನವಾಗಿ ಸಂಚರಿಸುತ್ತಿತ್ತು. ಆದರೆ ಕತ್ತಲೆಯಾದ್ದರಿಂದ ನೇಪಾಳದ ಬೆಟ್ಟಗುಡ್ಡಗಳ ಪ್ರಕೃತಿಸೌಂದರ್ಯವನ್ನು ಕಣ್ತುಂಬಿಕೊಳ್ಳಲು ಸಾಧ್ಯವಾಗಲಿಲ್ಲ. ಅಂತೂ ಇಂತೂ ಮುಂಜಾನೆ ೯.೩೦ ರ ವೇಳೆಗೆ ಬಸ್ಸು ಕಾಠ್ಮಂಡೌ ನಗರವನ್ನು ತಲುಪಿತು. ಪಶುಪತಿನಾಥ ಮಂದಿರದ ಅರ್ಚಕರಾದ ಶ್ರೀರಾಂ ಭಟ್ ಬಸ್ ಸ್ಟ್ಯಾಂಡ್ ನಿಂದ ನಮ್ಮನ್ನು ಕರೆದೊಯ್ಯಲು ಭರತ್ ಶರ್ಮಾ ಎಂಬುವವರನ್ನು ಕಳುಹಿಸಿದ್ದರು. ಭರತ್ ಶರ್ಮಾರೊಂದಿಗೆ ಮೊದಲೇ ಕಾಯ್ದಿರಿಸಿದ್ದ ಲಾಡ್ಜ್ ಗೆ ತೆರಳಿ ಸ್ನಾನಾದಿಗಳನ್ನು ಮುಗಿಸಿ ಪಶುಪತಿನಾಥ ಮಂದಿರದತ್ತ ಧಾವಿಸಿದೆವು. ಕರ್ನಾಟಕದ ನಾಲ್ವರು ಅರ್ಚಕರೂ ನಮ್ಮನ್ನು ಆತ್ಮೀಯವಾಗಿ ಬರಮಾಡಿಕೊಂಡರು. ಪ್ರಸಾದದ ರೂಪದಲ್ಲಿ ರುದ್ರಾಕ್ಷಿ ಮಾಲೆಯೂ ದೊರಕಿತು. ತಕ್ಷಣ ಶ್ರೀರಾಮ ಭಟ್ಟರ ಮನೆಯತ್ತ ವೇಗವಾಗಿ ನಡೆದರೂ, ಮನೆ ತಲುಪುವಾಗ ೧೧.೩೦ ಗಂಟೆಯಾಗಿತ್ತು. ಅವರ ಪತ್ನಿ ದೋಸೆಹಿಟ್ಟನ್ನು ಸಿದ್ಧಪಡಿಸಿಕೊಂಡು ನಮಗಾಗಿ ಕಾಯುತ್ತಿದ್ದರು. ಮಧ್ಯಾಹ್ನ

ಊಟವನ್ನೂ ಮಾಡಬೇಕಾದ್ದರಿಂದ ಎರಡೆರಡು ದೋಸೆಗಳನ್ನು ತಿಂದು ಭರತ್ ಶರ್ಮಾರೊಂದಿಗೆ ಪಶುಪತಿನಾಥ ದೇವಾಲಯದ ಸುತ್ತಮುತ್ತಲ ಪ್ರದೇಶಗಳ ದರ್ಶನಕ್ಕೆ ಹೊರಟೆವು. ಅಲ್ಲಿನ ಮುಖ್ಯ ಸ್ಥಳಗಳೆಂದರೆ ನಾಗವಾಸುಕೀ ಮಂದಿರ ಹಾಗೂ ಗುಹ್ಯೇಶ್ವರೀ ದೇವಾಲಯ. ಪಶುಪತಿನಾಥ ಮಂದಿರದ ಆವರಣದಲ್ಲಂತೂ ಅಸಂಖ್ಯಾತ ಮಂದಿರಗಳಿವೆ. ಇಂತಹ ಮಂದಿರಗಳ ರಾಶಿಯಲ್ಲಿ ಹಲವಾರು ಮಂದಿರಗಳು ನಮ್ಮ ದೃಗ್ಗೋಚರವಾಗಿದ್ದವು. ಅವುಗಳಲ್ಲಿ ಕೆಲವಾರು ಮಂದಿರಗಳ ಐತಿಹ್ಯವನ್ನು ಭರತ್ ಶರ್ಮಾರ ಬಳಿ ಕೇಳಿದ್ದೆವು. ಅವುಗಳಲ್ಲಿ ಕೆಲವೊಂದರ ಇತಿಹಾಸವನ್ನು ವರ್ಣಿಸಿದ್ದರು. ಅವರು ಹೇಳಿದುದರಲ್ಲಿ ಕೆಲವು ಮಂದಿರಗಳ ವೈಶಿಷ್ಟ್ಯ ನನ್ನ ಮನಸ್ಸನ್ನು ಹೊಕ್ಕಿತ್ತು. ಆದರೆ ವಾಪಾಸ್ಸಾಗುವಾಗ ಪಶುಪತಿನಾಥ ಮಂದಿರದ ಮುಖ್ಯಮೂರ್ತಿಯ ಚಿತ್ರವೊಂದೇ ನನ್ನ ಮನಸ್ಸಿನಲ್ಲಿ ಅಚ್ಚೊತ್ತಿತ್ತು. ಪಶುಪತಿನಾಥ ಮಂದಿರದ ಅಥವಾ ಇತರೇ ಮಂದಿರಗಳ ಬಗೆಗಿನ ಯಾವೊಂದು ಮಾಹಿತಿಯೂ ನೆನಪಿನಲ್ಲಿರಲಿಲ್ಲ.

ಪಶುಪತಿನಾಥ ಮಂದಿರದಿಂದ ಪೂಜೆ ಮುಗಿಸಿ ಅರ್ಚಕರಾದ ಶ್ರೀರಾಮ ಕಾರಂತರು ವಾಪಾಸ್ಸಾಗುವ ಸಮಯದಲ್ಲಿ ಅವರೊಂದಿಗೇ ಮನೆಗೆ ತೆರಳಿದೆವು. "ಮಾವೋವಾದಿಗಳ ಅಟ್ಟಹಾಸದಿಂದಾಗಿ ಅರ್ಚಕರ ಮೇಲೆ ಹಲ್ಲೆಗಳಾದಾಗಿನಿಂದ ಅರ್ಚಕರಿಗೂ ಪೋಲೀಸ್ ಸೆಕ್ಯುರಿಟಿ ನೀಡುತ್ತಾರೆ. ಆದ್ದರಿಂದ ಇಬ್ಬರು ಪೋಲೀಸರೊಂದಿಗೇ ಮಂದಿರಕ್ಕೆ ತೆರಳಬೇಕಾಗುತ್ತದೆ" ಎಂದು ಶ್ರೀರಾಮ ಕಾರಂತರು ಊಟದ ಸಮಯದಲ್ಲಿ ತಿಳಿಸಿದರು. ಅಲ್ಲದೇ ಕರ್ನಾಟಕ, ಮಹಾರಾಷ್ಟ್ರ, ಅಥವಾ ಆಂಧ್ರದ ವೇದಜ್ಞರೇ ಪಶುಪತಿನಾಥ ಮಂದಿರದ ಪೂಜೆ ನಡೆಸಬೇಕು, ಮತ್ತು ಪೂಜೆಯ ಅಧಿಕಾರ ವಂಶಪಾರಂಪರ್ಯವಾಗಿರಬಾರದು ಎಂಬ ನಿಯಮವನ್ನು ಶಂಕರಾಚಾರ್ಯರು ಜಾರಿಗೆ ತಂದರು ಎಂಬ ಮಾಹಿತಿಯನ್ನೂ ನೀಡಿದರು. ಊಟದ ನಂತರ ಕಾಠ್ಮಂಡೌನ ಇತರೆ ದೇವಾಲಯಗಳ ದರ್ಶನಕ್ಕೆ ವಾಹನದ ವ್ಯವಸ್ಥೆಯಾಗಿತ್ತು. ಸುಮಾರು ಎರಡು ಗಂಟೆಗಳ ಅವಧಿಯಲ್ಲಿ ಮಂದಿರಗಳಿಗೆ ತೆರಳಿ ಹಿಂದಿರುಗಿದೆವು. ಸ್ವಯಂಭೂ ಮಂದಿರ ಬೌದ್ಧರ ಸ್ತೂಪವಾಗಿದ್ದು ಮಂದಿರದ ಸುತ್ತಲೂ ಬುದ್ಧನ ವಿಗ್ರಹಗಳೇ ಮೊದಲಾದ ಅನೇಕ ವಸ್ತುಗಳು ಮಾರಾಟಕ್ಕಿವೆ. ತದನಂತರ ಬೂಢಾ ನೀಲಕಂಠ ಮಂದಿರಕ್ಕೆ ತೆರಳಿದೆವು. ಬೂಢಾ ನೀಲಕಂಠವೆಂಬುದು ಸ್ಥಳದ ಹೆಸರಾಗಿದ್ದು ಇಲ್ಲಿ ಮಲಗಿರುವ ವಿಷ್ಣುವಿನ ವಿಗ್ರಹವಿದೆ. ಬೆಳ್ತಂಗಡಿಯ ಸಮೀಪ ಸುರ್ಯ ಎಂಬ ಊರಿನಲ್ಲಿ ಸದಾಶಿವ ರುದ್ರ ದೇವಾಲಯವಿರುವಂತೆ ನೇಪಾಳದಲ್ಲೂ ಬೂಢಾನೀಲಕಂಠ ಎಂಬ ಸ್ಥಾನದಲ್ಲಿ ವಿಷ್ಣುವಿನ ವಿಗ್ರಹವಿದೆ. ಅಂಗಾತ ಮಲಗಿರುವ ವಿಷ್ಣುವಿನ ಮೂರ್ತಿ

ಶೇಷಶಯನನಿಗಿಂತ ಭಿನ್ನವಾಗಿದ್ದು ಸುತ್ತಲೂ ನೀರಿನಿಂದ ಆವೃತವಾಗಿದೆ. ಈ ಎರಡು ಮಂದಿರಗಳನ್ನು ಸಂದರ್ಶಿಸಿ ಶ್ರೀರಾಮ ಕಾರಂತರ ಮನೆಗೆ ತೆರಳಿದಾಗ ಕಾಫಿ ಹಾಗೂ ಬನ್ಸ್ ಗಳು ಸಿದ್ಧವಾಗಿದ್ದವು. ನೇಪಾಳದ ವಿಶಿಷ್ಟ ರುದ್ರಾಕ್ಷಿಗಳನ್ನು ಖರೀದಿಸಲು ಶ್ರೀರಾಮ ಕಾರಂತರು ಸೂಚಿಸಿದ ಅಂಗಡಿಗೆ ತೆರಳಿದೆವು. ಏಕಮುಖದಿಂದ ಏಕಾದಶಮುಖದವರೆಗಿನ ರುದ್ರಾಕ್ಷಿಗಳನ್ನೂ ವಿವಿಧ ಬಗೆಯ ಮಾಲೆಗಳನ್ನೂ, ಸ್ಫಟಿಕಗಳನ್ನೂ ಕಂಡು ಕೆಲವೊಂದಿಷ್ಟನ್ನು ಕೊಂಡುಕೊಂಡೆವು. ಎರಡು ದಿನಗಳ ಕಾಲ ಸತತ ಪ್ರಯಾಣ ಹಾಗೂ ತಿರುಗಾಟಗಳಿಂದ ಬಳಲಿದ್ದರಿಂದ ಶ್ರೀರಾಮ ಕಾರಂತರ ಮನೆಯಲ್ಲಿ ಊಟ ಪೂರೈಸಿ ಸುಮಾರು ೧೦ ನಿಮಿಷಗಳಷ್ಟು ನಡಿಗೆಯ ದೂರದಲ್ಲಿದ್ದ ಲಾಡ್ಜ್ ಗೆ ಹಿಂದಿರುಗಿ ಸುಖನಿದ್ದೆಗೆ ಜಾರಿದೆವು.

ಮರುದಿನ ಪಶುಪತಿನಾಥ ಮಂದಿರದ ಪ್ರಾತಃಕಾಲೀನ ಪೂಜೆಯ ಆರಂಭದ ಸಮಯಕ್ಕೇ ಅಂದರೆ ಮುಂಜಾನೆ ೮ ಗಂಟೆಗೆ ಮಂದಿರಕ್ಕೆ ಆಗಮಿಸುವಂತೆ ಶ್ರೀರಾಮ ಕಾರಂತರ ಸೂಚನೆಯಿತ್ತು. ಅವರ ಸೂಚನೆಯಂತೆ ಮಂದಿರಕ್ಕೆ ತೆರಳಿ ಪಶುಪತಿನಾಥನ ಅಲಂಕಾರ, ನಿರ್ಮಾಲ್ಯಾದಿಗಳನ್ನು ತೆಗೆಯುವುದನ್ನೂ, ವಿವಿಧ ಆಭರಣಗಳನ್ನೂ ಸಂದರ್ಶಿಸಿ ಧನ್ಯರಾದೆವು. ತಿಂಡಿ ಮುಗಿಸಿದಾಗ ಕಾಠ್ಮಂಡೌನ ಪ್ರೇಕ್ಷಣೀಯ ಸ್ಥಳಗಳಿಗೆ ತೆರಳಲು ವಾಹನ ಸಿದ್ಧವಾಗಿ ನಿಂತಿತ್ತು. ಮೊದಲಿಗೆ ೨೦೧೦ ರಲ್ಲಿ ನಿರ್ಮಿಸಲಾದ ಸುಮಾರು ೧೪೨ ಅಡಿ ಎತ್ತರದ, ತ್ರಿಶೂಲವನ್ನು ಹಿಡಿದು ನಿಂತಿರುವ ಬೃಹತ್ತಾದ ಶಿವನ ಪ್ರತಿಮೆಯನ್ನು ಸಂದರ್ಶಿಸಿದೆವು. ಈ ಪ್ರತಿಮೆ ಸಾಂಗ ಎಂಬ ಬೆಟ್ಟದ ಮೇಲಿದೆ. ಹಾಗೆಯೇ ಇನ್ನೊಂದು ಗುಡ್ಡದ ಮೇಲಿರುವ ಡೋಲೇಶ್ವರ ಎಂಬ ಮಂದಿರಕ್ಕೂ ನಮ್ಮ ಭೇಟಿಯಾಯಿತು. ಭೂಕಂಪದಿಂದಾಗಿ ಇಡಿಯ ಕಾಠ್ಮಂಡೌ ನಗರವೇ ಕಂಪಿಸಿದ್ದರೂ ಅತ್ಯಂತ ಹಾನಿಗೊಳಗಾಗಿದ್ದ ಪ್ರದೇಶ ಈ ಮಂದಿರದ್ದಾಗಿತ್ತು. ಮಂದಿರದ ಮರುನಿರ್ಮಾಣ ಕಾರ್ಯ ಭರದಿಂದ ಸಾಗುತ್ತಿತ್ತು. ಅಲ್ಲಿಂದ ಭಕ್ತಪುರದ ಕೋಟೆಗೆ ಬಂದು ಕೋಟೆಯ ಸಂಪೂರ್ಣ ಸಂದರ್ಶನಕ್ಕೆ ಸಮಯವಿಲ್ಲದ್ದರಿಂದ ಹೊರಗಿನಿಂದಲೇ ಕೋಟೆಯ ಆವರಣವನ್ನು ವೀಕ್ಷಿಸಿದೆವು. ಆ ದಿವಸ ಮಧ್ಯಾಹ್ನ ಶ್ರೀರಾಮ ಕಾರಂತರ ಮನೆಯಲ್ಲಿ ಪಾಯಸದ ಊಟವಾಯಿತು. ಮಧ್ಯಾಹ್ನದ ವಿಶ್ರಾಂತಿಯ ನಂತರ ಸಾಯಂಕಾಲದ ವೇಳೆಗೆ ಹುಣ್ಣಿಮೆಯ ವಿಶೇಷ ಅಭಿಷೇಕವನ್ನು ನೋಡಲು ಪಶುಪತಿನಾಥ ಮಂದಿರಕ್ಕೆ ತೆರಳಿದೆವು. ತಲಾ ೨೫ ಗಡಿಗೆಗಳಂತೆ ಕ್ರಮವಾಗಿ ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆಗಳ ಪಂಚಾಮೃತ ಅಭಿಷೇಕವಾಯಿತು. ತದನಂತರ ದೇವಾಲಯದ ಪ್ರಾಂಗಣದಲ್ಲಿ ಅನ್ನದ ರಾಶಿಯನ್ನು ಶಿವಲಿಂಗದಂತೆ ನಿರ್ಮಿಸಿ ವಿವಿಧ

ಭಕ್ಷ್ಯಗಳೊಂದಿಗೆ ಹುಣ್ಣಿಮೆಯ ವಿಶಿಷ್ಟ ಮಹಾನೈವೇದ್ಯದ ಸಮರ್ಪಣೆಯಾಯಿತು. ನೈವೇದ್ಯಕ್ಕಾಗಿ ಅನ್ನವನ್ನು ರಾಶಿಹಾಕಿ ಉಳಿದ ಭಕ್ಷ್ಯಗಳನ್ನು ತಂದಿಡುವ ಸುಮಾರು ೪೦-೪೫ ನಿಮಿಷಗಳ ಅವಧಿಯಲ್ಲಿ ಅರ್ಚಕರು ಪಶುಪತಿನಾಥನ ಅಲಂಕಾರವನ್ನು ಮುಗಿಸಿದ್ದರು. ಶಿವಲಿಂಗ ಎಣ್ಣೆದೀಪದ ಬೆಳಕಿನಲ್ಲಿ ಕಿರೀಟ, ವಸ್ತ್ರ, ಆಭರಣ, ಹೂವುಗಳಿಂದ ಶೋಭಿಸುತ್ತಿತ್ತು. ನೈವೇದ್ಯದ ನಂತರ ಪ್ರಸಾದವನ್ನು ಸ್ವೀಕರಿಸಲು ಭಕ್ತರು ಅನ್ನದ ರಾಶಿಯತ್ತ ದೌಡಾಯಿಸುತ್ತಿದ್ದರು. ಆರತಿಯ ನಂತರ ಪಶುಪತಿನಾಥ ದೇವಾಲಯದ ಅರ್ಚಕರಲ್ಲೊಬ್ಬರಾದ ಭಟ್ಕಳ ಮೂಲದ ನಾರಾಯಣ ಭಟ್ಟರ ಮನೆಗೆ ಭೇಟಿಯಿತ್ತು ಶ್ರೀರಾಮ ಕಾರಂತರ ಮನೆಗೆ ತೆರಳಿದೆವು. ಶ್ರೀರಾಮ ಕಾರಂತರು ಊಟದ ಸಮಯದಲ್ಲಿ ಮರುದಿನದ ನಮ್ಮ ಪ್ರಯಾಣದ ಬಗೆಗಿನ ಮಾಹಿತಿ ನೀಡಿದರು. "ಮುಂಜಾನೆ ೬.೩೦ ಕ್ಕೆ ಹೊರಡಬೇಕಾದ್ದರಿಂದ ತಿಂಡಿ ಮಾಡಿಕೊಡುವ ಕಷ್ಟ ಅನುಭವಿಸಬೇಡಿ" ಎಂದು ಪರಿಪರಿಯಾಗಿ ಬೇಡಿಕೊಂಡರೂ "ಇಡ್ಲಿ ಮಾಡಿಕೊಡುತ್ತೇವೆ, ಪಾರ್ಸೆಲ್ ಒಯ್ಯಬೇಕು, ಇಲ್ಲವಾದರೆ ಅತಿಥಿಸತ್ಕಾರ ಪೂರ್ಣವಾಗುವುದಿಲ್ಲ" ಎಂದರು. ಅತಿಥಿ ಸತ್ಕಾರದ ಬಗೆಗಿದ್ದ ಶ್ರೀರಾಮ ಕಾರಂತರ ಆಸ್ಥೆ ಹಾಗೂ ಅವರ ಆಸ್ಥೆಗನುಗುಣವಾಗಿ ಸಂತೋಷದಿಂದ ಶ್ರಮಪಡುತ್ತಿದ್ದ ಅವರ ಪತ್ನಿ ಗೀತಾ ಹಾಗೂ ಮಗಳು ಶಿವಾಂಗಿಯರ ಅತಿಥಿಸತ್ಕಾರ ಪ್ರಶಂಸನೀಯವಾಗಿತ್ತು.

ಮರುದಿನ ಮುಂಜಾನೆ ೬.೩೦ಕ್ಕೇ ಶ್ರೀರಾಮ ಕಾರಂತರ ಮನೆಯಿಂದ ಇಡ್ಲಿಗಳನ್ನು ತೆಗೆದುಕೊಂಡು ಅವರೇ ವ್ಯವಸ್ಥಾಪಿಸಿದ್ದ ಬೊಲ್ಯಾರೋ ವಾಹನದಲ್ಲಿ ನೇಪಾಳದ ಮತ್ತೊಂದು ಪ್ರೇಕ್ಷಣೀಯ ಸ್ಥಳವಾದ ಪೋಖರಾಕ್ಕೆ ಹೊರಟೆವು. ಪೋಖರಾದ ದಾರಿಯಲ್ಲಿ ಮನಕಾಮನಾ ಮಂದಿರವನ್ನು ಸಂದರ್ಶಿಸುವುದೂ ನಮ್ಮ ಯೋಜನೆಯಾಗಿತ್ತು. ಬೆಟ್ಟವೊಂದರ ತುತ್ತ ತುದಿಯಲ್ಲಿರುವ ಮನೋಕಾಮನಾ ಮಂದಿರಕ್ಕೆ ಕೇಬಲ್ ಕಾರ್ ಮೂಲಕವೂ ಹೋಗಬಹುದು. ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಕೇರಳದ ಪಾಲಕ್ಕಾಡ್ ನಲ್ಲಿ ಕೇಬಲ್ ಕಾರ್ ನಲ್ಲಿ ಸಂಚರಿಸಿದ್ದ ಅಸ್ಪಷ್ಟ ನೆನಪು ಮರುಕಳಿಸಿತು. ತೂಗುಸೇತುವೆಯನ್ನು ಕಟ್ಟಲು ಬಳಸುವಂತಹ ಉಕ್ಕಿನ ಉದ್ದವಾದ ಹಗ್ಗವೇ ಚಲಿಸುತ್ತಾ ತೂಗುಹಾಕಿರುವ ಕಾರ್ ಗಳನ್ನೂ ಒಯ್ಯುತ್ತಿತ್ತು. ೨.೮ ಕಿಮೀಗಳಷ್ಟು ದೂರವನ್ನು ಸುಮಾರು ೧೦ ನಿಮಿಷಗಳಲ್ಲಿ ಕೇಬಲ್ ಕಾರ್ ಕ್ರಮಿಸಿತು. ಕೇಬಲ್ ಕಾರ್ ನಲ್ಲಿ ೪೨೭೨ ಅಡಿಗಳಷ್ಟು ಎತ್ತರದಿಂದ ಭೂಮಿಯನ್ನು ನೋಡಿದಾಗ ಹೃದಯವೇ ಬಾಯಿಗೆ ಬಂದಂತಾಗುತ್ತಿತ್ತು. ತಲಾ ೬ ಮಂದಿ ಕುಳಿತುಕೊಳ್ಳಬಹುದಾದ ೩೧ ಕೇಬಲ್ ಕಾರ್ ಗಳು ಹಾಗೂ ಹರಕೆಯ ಕುರಿಗಳನ್ನು ಒಯ್ಯುವ ೨ ಕೇಬಲ್ ಕಾರ್

ಗಳು ಏಕಕಾಲದಲ್ಲಿ ಸಂಚರಿಸುತ್ತಿದ್ದವು. ಗಂಟೆಗೆ ೬೦೦ ಜನ ಕೇಬಲ್ ಕಾರ್ ನಲ್ಲಿ ಪ್ರಯಾಣಿಸಬಹುದಾಗಿತ್ತು. ಹೀಗೆ ಮನೋಹರವಾದ ಕೇಬಲ್ ಕಾರ್ ನ ಮೂಲಕ ಮನಕಾಮನಾದ ದರ್ಶನವನ್ನು ಮಾಡಿ ಸಂಜೆಯ ವೇಳೆಗೆ ಪೋಖರಾ ತಲುಪಿದೆವು. ಶ್ರೀರಾಮ ಕಾರಂತರ ಸಹಾಯಕರು ಪೋಖರಾದಲ್ಲೂ ಲಾಡ್ಜ್ ಕಾಯ್ದಿರಿಸಿದ್ದರು. ಸಾಯಂಕಾಲದ ಹೊತ್ತಿಗೆ ಪೋಖರಾ ನಗರದಲ್ಲಿ ಸಂಚರಿಸಿದಾಗ ನೇಪಾಳದ ಇನ್ನೊಂದು ಮುಖ ಗೋಚರವಾಯಿತು. ಕಾಠ್ಮಂಡೌ ನಗರ ದೇವಾಲಯಗಳಿರುವ ಪುಣ್ಯಭೂಮಿಯಾದರೆ ಪೋಖರಾ ಪ್ರೇಮಾಲಯಗಳಿರುವ ಭೋಗಭೂಮಿ. ನೇಪಾಳಕ್ಕೆ ವಿದೇಶೀ ಪ್ರವಾಸಿಗರನ್ನು ಆಕರ್ಷಿಸುವ ಮುಖ್ಯ ತಾಣ. ಪ್ರವಾಸೋದ್ಯಮವನ್ನುಉತ್ತೇಜಿಸಲು ಚಟಗಳಿಗೆ ಅವಕಾಶವನ್ನು ನೀಡುವುದು ಅತೀ ಮುಖ್ಯವಾದ್ದರಿಂದ ಮದ್ಯಾದಿಗಳ ಮಳಿಗೆಗಳು ನಗರದೆಲ್ಲೆಡೆ ರಾರಾಜಿಸುತ್ತಿದ್ದವು. ಬಹಳ ಹುಡುಕಾಟದ ನಂತರ ಮಾರವಾಡಿ ವೆಜ್ ಹೋಟೇಲೊಂದನ್ನು ಕಂಡು ಊಟ ಮಾಡಿ ಮಲಗಿದೆವು.

ಮರುದಿನ ಮುಂಜಾನೆ ೪.೩೦ ಕ್ಕೇ ಸಾರಂಗ್ ಕೋಟ್ ಗುಡ್ಡದ ಮೇಲಿನಿಂದ ಸೂರ್ಯೋದಯವನ್ನು ವೀಕ್ಷಿಸಲು ಹೊರಟೆವು. ೫.೩೦ ರ ಸುಮಾರಿಗೆ ಪೂರ್ವಪರ್ವತದಲ್ಲಿ ಉದಯಿಸುತ್ತಿದ್ದ ಸೂರ್ಯನ ಕೆಂಬಣ್ಣದ ಕಿರಣಗಳು ಉತ್ತರದಲ್ಲಿರುವ ಬಿಳಿಯ ಹಿಮಾಲಯ ಪರ್ವತದ ಮೇಲೆ ಬೀಳುತ್ತಿದ್ದವು. ಹಿಮಾಲಯದ ಕಾಂತಿ ಕ್ಷಣ ಕ್ಷಣಕ್ಕೂ ಕ್ರಮೇಣವಾಗಿ ಹೆಚ್ಚುತ್ತಿತ್ತು. ಚಿತ್ರಕಾರನೊಬ್ಬ ಹಿಮಾಲಯದ ಚಿತ್ರವನ್ನು ಬಿಡಿಸುತ್ತಿರುವಂತೆ ಭಾಸವಾಗುತ್ತಿತ್ತು. 'ಉನ್ಮೀಲಿತಂ ತೂಲಿಕಯೇವ ಚಿತ್ರಂ ಸೂರ್ಯಾಂಶುಭಿಃ'(ಸೂರ್ಯನ ಕಿರಣಗಳು ಕುಂಚದಿಂದ ಚಿತ್ರವನ್ನು ಬರೆಯುತ್ತಿವೆಯೇನೋ ಎಂಬಂತೆ) ಎಂಬ ಮಹಾಕವಿ ಕಾಲಿದಾಸನ ಮಾತು ಹಿಮಾಲಯದ ಮಗಳಾದ ಪಾರ್ವತಿಯಲ್ಲಿ ಮಾತ್ರವಲ್ಲಲದೇ ಹಿಮಾಲಯದಲ್ಲೂ ಅನ್ವಯವಾಗುವಂತೆ ಭಾಸವಾಗುತ್ತಿತ್ತು. ಪ್ರಕೃತಿಯ ಸೌಂದರ್ಯವನ್ನು ಆಸ್ವಾದಿಸಲು ಕಣ್ಣುಗಳೆರಡೂ ಸಾಲದೇ ಕ್ಯಾಮರಾದ ಕಣ್ಣುಗಳನ್ನೂ ಬಳಸಿ ಕೆಂಬಣ್ಣದ ಸೂರ್ಯ ಬೆಳ್ಳಗಾಗುವವರೆಗೂ ನೋಡುತ್ತಿದ್ದೆವು. ಅಲ್ಲಿಂದ ಸಮೀಪದ ವಿಂಧ್ಯವಾಸಿನೀ ಮಂದಿರಕ್ಕೆ ತೆರಳಿದೆವು. ಮುಂಜಾನೆ ೩.೩೦ ಕ್ಕೇ ಸ್ನಾನವನ್ನೂ ಪೂರೈಸಿದ್ದರಿಂದ ನಾನೊಬ್ಬನೇ ದೇವಾಲಯದ ಒಳ ಪ್ರಾಂಗಣದವರೆಗೂ ನಡೆದು ದೇವಿಯ ದರ್ಶನವನ್ನೂ ಮಾಡಿದೆ.

ತದನಂತರ ರೂಮಿಗೆ ಹಿಂದಿರುಗಿ ೯.೩೦ ರ ವೇಳೆಗೆ ನಮ್ಮ ಗಂಟುಮೂಟೆಗಳನ್ನು ಕಟ್ಟಿಕೊಂಡು ಪೋಖರಾದ ಇನ್ನಿತರ ಪ್ರೇಕ್ಷಣೀಯ ಸ್ಥಳಗಳತ್ತ

ಹೊರಟೆವು. ಮೊದಲಿಗೆ ದೇವೀಸ್ ಫಾಲ್ ಎಂಬ ಜಲಪಾತವನ್ನು ನೋಡಿದೆವು. ಮಲೆನಾಡಿನ ಹಳ್ಳಿ ಹಳ್ಳಿಗಳಲ್ಲಿ ಇಂತಹ ಜಲಪಾತಗಳನ್ನು ಕಾಣಬಹುದು. ಆದರೆ ಪೇಟೆಯ ಸಮೀಪವಿದೆ ಎಂಬ ಕಾರಣಕ್ಕೆ ಪ್ರವೇಶ ಶುಲ್ಕವನ್ನೂ ನೀಡಿ ನಮ್ಮಂತಹ ಮೂರ್ಖ ಪ್ರವಾಸಿಗರು ಜಲಪಾತವನ್ನು ಸಂದರ್ಶಿಸುತ್ತಾರೆ. ಅಲ್ಲಿಂದ ಮುಂದೆ ಪಗೋಡಾ ಬುದ್ಧಸ್ತೂಪದ ದರ್ಶನವೂ ಆಯಿತು. ಸುಮಾರು ಒಂದು ಕಿ.ಮೀ ಯಷ್ಟು ದೂರದ ಬೆಟ್ಟದ ದಾರಿಯಲ್ಲಿ ನಡೆದರೆ ಬೃಹತ್ತಾದ ಪಗೋಡಾ ಸ್ತೂಪವನ್ನು ಕಾಣಬಹುದು. ಸ್ತೂಪವಿರುವ ಎತ್ತರದ ಸ್ಥಳದಿಂದ ಸಮಗ್ರ ಪೋಖರಾ ನಗರದ ದರ್ಶನವಾಗುತ್ತದೆ. ಪೋಖರಾದ ವಿಶಿಷ್ಟ ಆಕರ್ಷಣೆಯಾದ ಪ್ಯಾರಾಗ್ಲೈಡಿಂಗ್ ನಡೆಸುತ್ತಾ ಗಾಳಿಯಲ್ಲಿ ಓಲಾಡುತ್ತಿರುವ ಜನರನ್ನು ಪಗೋಡಾ ಸ್ತೂಪದಿಂದ ಕಾಣಬಹುದು. ಅಲ್ಲಿಂದ ಕೆಳಗಿಳಿದು ಕೆರೆಯೊಂದರ ಮಧ್ಯದಲ್ಲಿರುವ ವಾರಾಹಿ ದೇವಾಲಯದ ದರ್ಶನವೂ ಆಯಿತು. ಕೆರಯ ಮಧ್ಯದಲ್ಲಿ ದಡದಿಂದ ಸುಮಾರು ೨೦೦ ಮೀಟರ್ ದೂರದಲ್ಲಿರುವ ವಾರಾಹೀ ದೇವಾಲಯಕ್ಕೆ ದೋಣಿಯ ಮೂಲಕ ಪ್ರಯಾಣಿಸಬೇಕು. ಕೆರೆಯ ನೀರು ಶಾಂತವಾಗಿರುವುದರಿಂದ ಹಾಗೂ ಜನಜಂಗುಳಿಯೂ ಕಡಿಮೆ ಇರುವುದರಿಂದ ನಮಗೆ ಉತ್ಸಾಹವಿದ್ದರೆ ನಾವಿಕನ ಮಾರ್ಗದರ್ಶನದಂತೆ ನಾವೇ ಹುಟ್ಟು ಹಾಕಿ ದೋಣಿಯನ್ನೂ ನಡೆಸಬಹುದು. ಆಸಕ್ತ ಮಿತ್ರರು ನಾವಿಕನ ಮಾರ್ಗದರ್ಶನದಂತೆ ದೋಣಿ ನಡೆಸಿದರು.

ನಮ್ಮನ್ನು ಕಾಠ್ಮಂಡೌನಿಂದ ಕರೆದುಕೊಂಡು ಬಂದಿದ್ದ ಬೊಲ್ಯಾರೋ ವಾಹನವನ್ನು ಗಂಡಕೀ ನದಿ ಹರಿಯುವ ಪ್ರದೇಶವಾದ ಮುಕ್ತಿನಾಥದವರೆಗೂ ಕಾಯ್ದಿರಿಸಲಾಗಿತ್ತು. ಆದರೆ ಎರಡು ದಿನಗಳ ದುರ್ಗಮ ಪ್ರಯಾಣವನ್ನು ನಡೆಸಿ ಮುಕ್ತಿನಾಥದ ದರ್ಶನವನ್ನು ಮಾಡುವುದರಲ್ಲಿ ನನಗೂ ರವಿಶಂಕರನಿಗೂ ಹುಮ್ಮಸ್ಸಿರಲಿಲ್ಲ. ಮುಕ್ತಿನಾಥಕ್ಕೆ ತೆರಳಲು ಸಾರ್ವಜನಿಕ ಸಾರಿಗೆ ವ್ಯವಸ್ಥೆಗಳು ಇಲ್ಲವಾದ್ದರಿಂದ ಕಾಯ್ದಿರಿಸಿದ ವಾಹನ ಅಥವಾ ವಿಮಾನದ ಮೂಲಕ ಮುಕ್ತಿನಾಥಕ್ಕೆ ಪಯಣಿಸಬೇಕಾಗಿತ್ತು. ದುಬಾರಿ ಬಾಡಿಗೆಯನ್ನೂ ತೆತ್ತು ದುರ್ಗಮವಾದ ಸ್ಥಾನಕ್ಕೆ ನಾವಿಬ್ಬರೂ ಬರುವುದಿಲ್ಲ ಎಂದು ಎರಡು ತಿಂಗಳ ಹಿಂದೆ ನೇಪಾಳ ಪ್ರವಾಸದ ರೂಪುರೇಷೆಗಳನ್ನು ಸಿದ್ಧಪಡಿಸುವಾಗಲೇ ಸ್ಪಷ್ಟಪಡಿಸಿದ್ದೆವು. ಹೀಗಾಗಿ ಸೋಮವಾರ ಮಧ್ಯಾಹ್ನ ಪೋಖರಾದಿಂದ ಮುಕ್ತಿನಾಥಕ್ಕೆ ಮಿತ್ರರನ್ನು ಬೀಳ್ಕೊಟ್ಟು ಭಾರತದತ್ತ ಪ್ರಯಾಣ ಬೆಳೆಸಿದೆವು.

ನಾಲ್ಕು ದಿನಗಳನ್ನು ಸಂಪೂರ್ಣವಾಗಿ ನೇಪಾಳದಲ್ಲೇ ಕಳೆದರೂ ವಿದೇಶದಲ್ಲಿದ್ದಂತೆ ಭಾಸವಾಗಲೇ ಇಲ್ಲ. ನೇಪಾಳದ ಆಡುಭಾಷೆ ನೇಪಾಳಿಯಾದರೂ ಹಿಂದೀ ಭಾಷೆಯ ಜ್ಞಾನ ಸಾಮಾನ್ಯವಾಗಿ ಪ್ರತಿಯೊಬ್ಬರಿಗೂ ಇತ್ತು. ಅಲ್ಲದೇ ಬೋರ್ಡ್ ಗಳನ್ನು ದೇವನಾಗರೀ ಲಿಪಿಯಲ್ಲಿಯೇ ಬರೆಯಲಾಗಿತ್ತು. ನಾವು ವಿದೇಶಿಗರಾಗಿದ್ದರೂ ಉತ್ತರ ಭಾರತದಲ್ಲಿ ಕೇಳುವಂತೆಯೇ "ನೀವು ದಕ್ಷಿಣ ಭಾರತದವರೇ"? ಎಂದು ಕೇಳುತ್ತಿದ್ದರೇ ಹೊರತು "ನೀವು ಭಾರತೀಯರೇ"? ಎಂದಲ್ಲ. ನೇಪಾಳದ ಪ್ರಕೃತಿ ಸೌಂದರ್ಯವನ್ನು ಆಸ್ವಾದಿಸಲು ಪಾಶ್ಚಾತ್ಯರ ದಂಡೇ ಹರಿದು ಬರುವುದರಿಂದ ಎಲ್ಲ ಪ್ರೇಕ್ಷಣೀಯ ಸ್ಥಳಗಳಲ್ಲೂ ದುಬಾರಿ ಪ್ರವೇಶ ಶುಲ್ಕವನ್ನು ವಸೂಲು ಮಾಡಲಾಗುತ್ತದೆ. ಹೆಚ್ಚಿನ ಕಡೆಗಳಲ್ಲಿ ನೇಪಾಳಿಗರಿಗೆ ನಿಃಶುಲ್ಕ ಪ್ರವೇಶವಾದರೆ ಸಾರ್ಕ್ ದೇಶದ ಪ್ರವಾಸಿಗಳಿಗೆ ಶುಲ್ಕದಲ್ಲಿ ಕಡಿತವಿರುತ್ತದೆ. ಸಾಮಾನ್ಯವಾಗಿ ಎಲ್ಲ ವಸ್ತುಗಳೂ ಭಾರತದಿಂದ ನೇಪಾಳಕ್ಕೆ ರಫ್ತಾಗುವುದರಿಂದ ವಸ್ತುಗಳ ಮೌಲ್ಯ ಭಾರತದಲ್ಲಿನ ಮೌಲ್ಯಕ್ಕಿಂತ ಒಂದೂವರೆ ಪಟ್ಟು ಹೆಚ್ಚಾಗಿತ್ತು. ಮೊದಲೇ ಹೇಳಿದಂತೆ ಭಾರತದ ೧ ರೂ ನೇಪಾಳದ ೧.೬ ರೂಪಾಯಿಗಳಾದ್ದರಿಂದ ಹದಿನಾರರ ಮಗ್ಗಿಯನ್ನು ಕಲಿತರೆ ಭಾರತದ ಕರೆನ್ಸಿಯ ಸಹಾಯದಿಂದಲೇ ಸುಗಮವಾಗಿ ವ್ಯವಹಾರಗಳನ್ನು ನಡೆಸಬಹುದು.

ಮಧ್ಯಾಹ್ನವೇ ಮಿತ್ರರಿಂದ ಬೇರ್ಪಟ್ಟರೂ ಭಾರತಕ್ಕೆ ಹೊರಡುವ ಬಸ್ಸು ರಾತ್ರಿ ೭.೩೦ ರ ಸುಮಾರಿಗಿತ್ತು. ನಾಲ್ಕು ಗಂಟೆಗಳ ಬಿಡುವಿನ ವೇಳೆಯಲ್ಲಿ ಪೋಖರಾದ ಇತರೆ ಪ್ರೇಕ್ಷಣೀಯ ಸ್ಥಳಗಳನ್ನು ನೋಡುವ ಅವಕಾಶವಿತ್ತು. ಆದರೆ ನೇಪಾಳಕ್ಕೆ ಬಂದಾಗಿನಿಂದ ವಾಹನವನ್ನು ಬುಕ್ ಮಾಡಿಯೇ ತಿರುಗಾಡಿದ್ದರಿಂದ ನೇಪಾಳದ ಸಾರ್ವಜನಿಕ ಸಾರಿಗೆ ವ್ಯವಸ್ಥೆಯ ಬಗೆಗೆ ಹೆಚ್ಚಿನ ಮಾಹಿತಿಯಿರಲಿಲ್ಲ. ಆಟೋರಿಕ್ಷಾಗಳಂತೂ ನೇಪಾಳದಲ್ಲಿ ಅತಿ ವಿರಳವಾಗಿದ್ದವು. ಸಮೀಪದ ಪ್ರೇಕ್ಷಣೀಯ ಸ್ಥಳಗಳ ಬಗ್ಗೆ ಮಾಹಿತಿ ಸಂಗ್ರಹಿಸಲು ಇಂಟರ್ ನೆಟ್ ಸಂಪರ್ಕವೂ ಇರಲಿಲ್ಲ. ಅಲ್ಲದೇ ನೇಪಾಳಕ್ಕೆ ಬಂದು ತೃಪ್ತಿ ಎನಿಸುವಷ್ಟು ತಿರುಗಾಟವೂ ಮುಗಿದಿತ್ತು. ಆದ್ದರಿಂದ ಬಸ್ ಸ್ಟಾಂಡ್ ನ ಆವರಣದಲ್ಲೇ ಸಮಯವನ್ನು ಕಳೆದೆವು. ೭.೩೦ ಕ್ಕೆ ಪೋಖರಾದಿಂದ ನೇಪಾಳದ ಗಡಿನಾಡು ಭೈರವಾಕ್ಕೆ ತೆರಳುವ ಬಸ್ಸೊಂದು ಬಂದಿತು. ಈ ಬಸ್ಸು ನಮ್ಮ ಕರ್ನಾಟಕದಲ್ಲಿ ಸಣ್ಣ ಹಳ್ಳಿಯನ್ನು ಸಂಪರ್ಕಿಸುವ ಬಸ್ಸಿಗಿಂತ ನಿಕೃಷ್ಟವಾಗಿತ್ತು. ನಮ್ಮ ಕರ್ನಾಟಕದ ಬಸ್ಸಿನ 'ವೈಭವ'ವನ್ನು ನೆನಪಿಸಿಕೊಳ್ಳುತ್ತಾ, ಪ್ರಯಾಣಿಸುತ್ತಿರುವ ಬಸ್ಸನ್ನು ಜರಿಯುತ್ತಾ ಭೈರವಾಕ್ಕೆ ತಲುಪಿದಾಗ ಮುಂಜಾನೆ ೪ ಗಂಟೆಯಾಗಿತ್ತು. ಅಲ್ಲಿಂದ ನಮ್ಮ ಪಕ್ಕದ ಮನೆಗೆ ತೆರಳಿದಂತೆಯೇ ಗಡಿ ದಾಟಿ ಭಾರತವನ್ನು ಪ್ರವೇಶಿಸಿದೆವು. ಗಡಿಯಲ್ಲಿ

ಯಾವುದೇ ರೀತಿಯಾದ ತಪಾಸಣೆಗಳಿರಲಿಲ್ಲ. ಅದೃಷ್ಟಕ್ಕೆ ಭಾರತದ ಗಡಿನಾಡಾದ ಸೋನೌಲೀಯಿಂದ ಗೋರಖ್ ಪುರದ ಬಸ್ಸು ತಕ್ಷಣವೇ ಹೊರಟಿತು. ಮುಂಜಾನೆ ೭.೩೦ ರ ಸುಮಾರಿಗೆ ಗೋರಖ್ ಪುರ್ ಜಂಕ್ಷನ್ ರೈಲು ನಿಲ್ದಾಣವನ್ನು ತಲುಪಿದೆವು.

ನಮ್ಮ ಮಿತ್ರರು ಮುಕ್ತಿನಾಥದಿಂದ ಮರಳುವಷ್ಟರಲ್ಲಿ ಕೋಲ್ಕತ್ತಾದಲ್ಲಿನ ತನ್ನ ಅಕ್ಕನ ಮನೆಗೆ ಹೋಗಿ ಬರೋಣ ಎಂಬ ಯೋಚನೆ ರವಿಶಂಕರನದ್ದಾಗಿತ್ತು. ೯ ತಿಂಗಳು ವಯಸ್ಸಿನ ಅಕ್ಕನ ಸಣ್ಣ ಮಗು ಆತನನ್ನು ವಿಶೇಷವಾಗಿ ಆಕರ್ಷಿಸುತ್ತಿತ್ತು. ಎರಡು ದಿನಗಳ ಹಿಂದೆ ಟಿಕೆಟ್ ಬುಕ್ ಮಾಡಿದರೂ ಆರ್. ಎ. ಸಿ ಸೀಟು ದೊರಕಿತ್ತು. ೧೧.೩೦ ಕ್ಕೆ ಗೋರಖ್ ಪುರದಿಂದ ಹೊರಡಬೇಕಾಗಿದ್ದ ರೈಲು ೧.೩೦ ಕ್ಕೆ ಹೊರಟಿತ್ತು. ಒಂದೇ ಸೀಟಿನಲ್ಲಿ ಇಬ್ಬರೂ ಕಷ್ಟಪಟ್ಟು ಪ್ರಯಾಣಿಸಿ ಮುಂಜಾನೆ ೭.೩೦ ರ ವೇಳೆಗೆ ವರ್ಧಮಾನ್ ಜಂಕ್ಷನ್ ತಲುಪಿದೆವು. ಅಲ್ಲಿಂದ ೧ ಗಂಟೆಗಳ ಕಾಲ ಹೌರಾಕ್ಕೆ ತೆರಳುವ ಲೋಕಲ್ ಟ್ರೈನ್ ನಲ್ಲಿ 'ಡೆಂಗುಣಿ' ಎಂಬಲ್ಲಿಗೆ ಪ್ರಯಾಣಿಸಿದೆವು. ಅತ್ಯಂತ ಜನಸಂದಣಿಯಿದ್ದ ರೈಲಿನಿಂದ ಹೇಗೋ ನುಸುಳಿಕೊಂಡು ಹೊರಗಿಳಿದು ಅಕ್ಕನ ಮನೆಯನ್ನು ತಲುಪಿದೆವು. ನೇಪಾಳ ಪ್ರವಾಸದಿಂದ ಬಳಲಿದ್ದ ನಮಗೆ ಉತ್ತಮವಾದ ವಿಶ್ರಾಂತಿ ದೊರಕಿತು. ಅಕ್ಕನ ಮಗು ಸಣ್ಣದಾಗಿದ್ದರಿಂದ ಮನೆಯಲ್ಲಿಡೀ ಹೊರಳಾಡುತ್ತಿತ್ತು. 'ಕೂಸು ಇದ್ದ ಮನೆಗೆ ಬೀಸಣಿಕೆ ಯಾತಕ್ಕ ಕೂಸು ಕಂದಮ್ಮ ಒಳಹೊರಗ ಆಡಿದರ ಬೀಸಣಿಕೆ ಗಾಳಿ ಸುಳಿದಾವ' ಎಂಬ ಜಾನಪದ ಮಾತಿನ ಮೂರ್ತರೂಪದಂತೆ ಮಗು ಕಂಗೊಳಿಸುತ್ತಿತ್ತು. ಮರುದಿನ ಬೇಲೂರು ಮಠಕ್ಕೆ ತೆರಳಿದೆವು. ವಿವೇಕಾನಂದರು ತಮ್ಮ ಬದುಕಿನ ಅಂತಿಮ ಕ್ಷಣಗಳನ್ನು ಕಳೆದ ಜಾಗ ಇದಾಗಿದೆ. ಈ ಸ್ಥಳದಲ್ಲಿ ರಾಮಕೃಷ್ಣ ಪರಮಹಂಸ ಮಂದಿರವನ್ನು ನಿರ್ಮಿಸಲಾಗಿದೆ. ಅಂತೆಯೇ ರಾಮಕೃಷ್ಣ ಪರಮಹಂಸ ಹಾಗೂ ಸ್ವಾಮಿ ವಿವೇಕಾನಂದರು ಬಳಸಿದ ವಸ್ತುಗಳನ್ನು ಸಂಗ್ರಹಿಸಿ ಸಂಗ್ರಹಾಲಯದಲ್ಲಿ ಪ್ರದರ್ಶನಕ್ಕಿಡಲಾಗಿದೆ. ಬೇಲೂರು ಮಠದ ಸಮೀಪದಲ್ಲಿರುವ ವಿವೇಕಾನಂದ ವಿಶ್ವವಿದ್ಯಾಲಯದ ಸಂಸ್ಕೃತ ವಿಭಾಗದಲ್ಲಿದ್ದ ಗೆಳೆಯರನ್ನೂ ಭೇಟಿ ಮಾಡಿದೆವು. ಮಗುವನ್ನು ಕರೆದುಕೊಂಡು ತಿರುಗಾಟ ಕಷ್ಟಕರವಾದ್ದರಿಂದ ಹೆಚ್ಚು ತಿರುಗಾಟವನ್ನು ಮಾಡಲಿಲ್ಲ. ಮಾರನೆಯ ದಿನ ಮುಂಜಾನೆ ೯.೩೦ ಕ್ಕೆ ಹೊರಟು ನಂತರದ ದಿನ ಮುಂಜಾನೆ ೬ ಗಂಟೆಗೆ ಪ್ರಯಾಗವನ್ನು ತಲುಪಿದೆವು. ೦೮-೦೪-೨೦೧೮ ರಂದು ೧೦ ದಿನಗಳ ಸುದೀರ್ಘ ಪ್ರಯಾಣ ಮುಗಿದಿತ್ತು.

ಮೇ ತಿಂಗಳಿನ ೧೦ ನೆಯ ತಾರೀಕು ನಮ್ಮ ತರಗತಿಗಳ ಅಂತಿಮ ದಿನವಾಗಿತ್ತು. ರಜೆಯಲ್ಲಿಯೇ ಹೆಚ್ಚಿನ ತಿರುಗಾಟಗಳನ್ನು ಪೂರೈಸಿದ್ದರಿಂದ ಅಟೆಂಡೆಂನ್ಸ್

ಶಾರ್ಟೇಜ್ ನ ಸಮಸ್ಯೆಯಿರಲಿಲ್ಲ. ಪ್ರಯಾಗದಲ್ಲಿದ್ದಷ್ಟು ದಿನ ತಪ್ಪದೇ ತರಗತಿಗಳಿಗೆ ಹಾಜರಾಗುತ್ತಿದ್ದೆವು. ಏಪ್ರಿಲ್ ೧೯ ರಂದು ನಮ್ಮ ಆಚಾರ್ಯ(ಎಂ.ಎ) ತರಗತಿಯಲ್ಲಿನ ಸಹಪಾಠಿ ಅಹಲ್ಯಾಳ ಮದುವೆಯಿತ್ತು. ಸಾಧ್ಯವಾದರೆ ಮದುವೆಗೆ ಹೋಗಬೇಕು ಎಂದುಕೊಂಡು ನಾನು ಹಾಗೂ ರವಿಶಂಕರ ರಿಸರ್ವೇಶನ್ ಮಾಡಿಸಿದ್ದೆವು. ಎಷ್ಟೇ ಆತ್ಮೀಯವಾದ ಗೆಳೆತನವಿದ್ದರೂ, ಪಕ್ಕದ ಮನೆಯಲ್ಲಿನ ಹತ್ತಿರದ ಬಂಧುಗಳೇ ಕುಂಟು ನೆವ ಹೇಳಿ ಮದುವೆಗೆ ಅನುಪಸ್ಥಿತರಾಗುವ ಈ ಕಾಲದಲ್ಲಿ ೨೦೦೦ ಕಿ.ಮೀ ದೂರದಿಂದ ಮದುವೆಗೆ ತೆರಳುವುದನ್ನು ಹುಚ್ಚುತನವೆಂದೇ ಹೇಳಬಹುದು. ಆದರೆ ಮದುವೆಗೆ ಬರಲೇಬೇಕೆಂಬ ಅಹಲ್ಯಾಳ ಒತ್ತಾಯದೊಂದಿಗೆ ನಮ್ಮ ಹೆಚ್ಚುವರಿ ಲಗೇಜುಗಳನ್ನು ಊರಿಗೆ ಸಾಗಿಸಬಹುದು ಎಂಬ ಸ್ವಾರ್ಥವೂ ಸೇರಿ ನಮ್ಮನ್ನು ರೈಲನ್ನೇರುವಂತೆ ಮಾಡಿತ್ತು. ಮೊದಲೇ ಹೇಳಿದಂತೆ ನನ್ನ ಲಗೇಜ್ ಅತ್ಯಲ್ಪವಾಗಿತ್ತು. ಆದರೆ ಮುರಳೀಕೃಷ್ಣ ಸುಮಾರು ೨೫ ಕಿಲೋ ಭಾರದ ತನ್ನ ಚೀಲವನ್ನು ಊರಿಗೆ ತಲುಪಿಸುವ ಜವಾಬ್ದಾರಿಯನ್ನು ನನಗೆ ವಹಿಸಿದ. ಗಣೇಶ ಕಾಶಿಯಲ್ಲಿ ಕೊಂಡ ತಬಲಾವನ್ನು ರವಿಶಂಕರನ ಕೈಗೊಪ್ಪಿಸಿದ. ಒಟ್ಟಾರೆಯಾಗಿ ಮದುವೆಗೆ ಹಾಜರಾಗುವ ಮೂಲಕ ಅಹಲ್ಯಾಳನ್ನು, ಚೀಲವನ್ನು ಸಾಗಿಸುವುದರ ಮೂಲಕ ಮುರಳೀಕೃಷ್ಣನನ್ನು ತೃಪ್ತಿಪಡಿಸಿದ ತೃಪ್ತಿ ನನಗೆ ದೊರಕಿತು.

ಮದುವೆಯಿಂದ ವಾಪಾಸ್ಸಾಗುವಾಗ ಬೆಂಗಳೂರಿನಿಂದ ಪ್ರಯಾಗಕ್ಕೆ ಡೈರೆಕ್ಟ್ ರೈಲಿನಲ್ಲಿ ಸೀಟ್ ಸಿಗದಿದ್ದುದು ರೊಟ್ಟಿ ಜಾರಿ ತುಪ್ಪಕ್ಕೆ ಬಿದ್ದಂತಾಗಿತ್ತು. ಬೆಂಗಳೂರಿನಿಂದ ಆಗ್ರಾಕ್ಕೆ ಟಿಕೆಟ್ ಮಾಡಿಸಿದ್ದೆವು. ಆಗ್ರಾದಲ್ಲಿ ಒಂದು ಹಗಲು ಸಮಯವಿತ್ತು. ಕಳೆದ ಬಾರಿ ಆಗ್ರಾಕ್ಕೆ ಹೋದಾಗ ತಾಜ್ ಮಹಲ್ ನೋಡಿರಲಿಲ್ಲ. ಆದ್ದರಿಂದ ತಾಜ್ ಮಹಲ್ ನ ಸಂದರ್ಶನದ ಅವಕಾಶ ಈ ಬಾರಿ ದೊರಕಿತು. ಸುಮಾರು ನಲವತ್ತು ಲಕ್ಷ(ಈಗಿನ ೧೦೦೦ ಕೋಟಿ) ರೂಗಳ ವೆಚ್ಚದಲ್ಲಿ ಕಟ್ಟಲಾಗಿದ್ದ ತಾಜ್ ಮಹಲ್ ನಲ್ಲಿ ನನಗೆ ಅಷ್ಟೇನೂ ವಿಶೇಷತೆ ಕಾಣಲಿಲ್ಲ. ಬೆಲೆಬಾಳುವ ಅಮೃತಶಿಲೆ ಮೊದಲಾದ ಅಮೂಲ್ಯ ಕಲ್ಲುಗಳಿಂದ ಕಟ್ಟಿಸಲಾಗಿದ್ದ ತಾಜ್ ಮಹಲನ್ನು ಹತ್ತಿರದಿಂದ ಸೂಕ್ಷ್ಮವಾಗಿ ಗಮನಿಸಿದರೆ ವಿಶಿಷ್ಟವಾದ ಕುಸುರಿ ಕೆಲಸವೇನೂ ಕಾಣುವುದಿಲ್ಲ. 'ದೂರತಃ ಪರ್ವತೋ ರಮ್ಯಃ' ಎಂಬ ಮಾತಿನಂತೆ ದೂರದಿಂದ ನೋಡಲು ಸುಂದರವಾಗಿದೆ. ತಾಜ್ ಮಹಲ್ ಗಿಂತಲೂ ಸುಂದರವಾದ ಅನೇಕ ಶಿಲ್ಪಗಳು ಭಾರತದಲ್ಲಿದ್ದರೂ ತಾಜ್ ಮಹಲನ್ನು ವೈಭವೀಕರಿಸಲಾಗುತ್ತಿದೆ ಎಂದೆನಿಸಿತು. ಮಧ್ಯಾಹ್ನದವರೆಗೂ ತಾಜ್ ಮಹಲ್ ಆವರಣದಲ್ಲಿ ತಿರುಗಾಡಿ

ಮಧ್ಯಾಹ್ನದ ನಂತರ ರೈಲ್ವೇ ಸ್ಟೇಶನ್ ನಲ್ಲಿ ಕಾಲ ಕಳೆದೆವು. ರಾತ್ರೆ ರೈಲನ್ನೇರಿ ಪ್ರಯಾಗದತ್ತ ಪ್ರಯಾಣ ಬೆಳೆಸಿದೆವು.

ಕಾಶಿಯೆಂದರೆ ಭೂಕೈಲಾಸ. ಗೋಕರ್ಣಕ್ಕೆ ಭೂಕೈಲಾಸವೆಂಬ ಹೆಸರಿದ್ದರೂ 'ಶಿವಕ್ಷೇತ್ರ' ಎಂದ ತಕ್ಷಣ ನೆನಪಿಗೆ ಬರುವುದು ಕಾಶಿಯೇ. ಅಲ್ಲದೇ ಭಾರತದಲ್ಲಿನ ಪುಣ್ಯಕ್ಷೇತ್ರಗಳ ಬಗ್ಗೆ ಯೋಚಿಸಿದರೂ ಮೊದಲಿಗೆ ಕಾಶಿಯೇ ನೆನಪಿಗೆ ಬರುತ್ತದೆ. ಎರಡು ಬಾರಿ ಕಾಶಿಗೆ ಹೋಗಿ ನಾಲ್ಕೈದು ಬಾರಿ ವಿಶ್ವನಾಥನ ದರ್ಶನ ಮಾಡಿದ್ದರೂ ಪುನಃ ಕಾಶಿಗೆ ಹೋಗುವ ಮನಸ್ಸಾಯಿತು. ಪರೀಕ್ಷೆಗಳೂ ಸಮೀಪದಲ್ಲಿದ್ದುದರಿಂದ ಮುರಳಿಕೃಷ್ಣ ಹಾಗೂ ಗಣೇಶ ಪ್ರಸಾದ ಕಾಶಿಗೆ ಬರುವುದಿಲ್ಲವೆಂದರು. ಗಣೇಶ ಪೂಜಾ ಕಾರ್ಯಕ್ರಮವೊಂದರ ನಿಮಿತ್ತ ಹೈದರಾಬಾದ್ ಗೆ ತೆರಳಿದ್ದ. ನಾನು ಹಾಗೂ ರವಿಶಂಕರ ಏಪ್ರಿಲ್೨೭ ನೆಯ ತಾರೀಕಿನಂದು ಮುಂಜಾನೆ ೬.೦೦ ಗಂಟೆಗೆ ಹೊರಡುವ ರೈಲಿನಲ್ಲಿ ಕಾಶಿಗೆ ಹೋಗುವುದೆಂದು ತೀರ್ಮಾನಿಸಿದ್ದೆವು. ಬೆಳಗಿನ ಜಾವ ರೈಲು ನಿಲ್ದಾಣ ತಲುಪಿದಾಗ ರೈಲು ಬರುವುದು ಒಂದೂವರೆ ಗಂಟೆ ತಡವಾಗಬಹುದೆಂಬ ಸೂಚನೆ ದೊರಕಿತು. ತಡವಾಗಿ ಹೋದರೆ ಅಷ್ಟೇನೂ ಪ್ರಯೋಜನವಿಲ್ಲವೆಂದುಕೊಂಡು ಕಾಶಿಗೆ ಹೋಗುವುದನ್ನು ಆ ದಿನದ ಮಟ್ಟಿಗೆ ಮುಂದೂಡಿದೆವು. ಅನೇಕ ದಿನಗಳಿಂದ ಸಂಕಲ್ಪಿಸಿದ್ದ ಸಂಗಮ ಸ್ನಾನವನ್ನು ಇಂದೇ ಮಾಡುವುದೆಂದು ತೀರ್ಮಾನಿಸಿ ಸಂಗಮದತ್ತ ನಡೆದೆವು. ನಾವು ಪ್ರಯಾಗಕ್ಕೆ ಬಂದ ದಿನಗಳಲ್ಲಿ ನಮ್ಮ ವಾಸಸ್ಥಾನದಿಂದ ಸುಮಾರು ೩ ಕಿಮೀ ದೂರದಲ್ಲಿದ್ದ ಸಂಗಮ ಈಗ ಸುಮಾರು ೪ ಕಿ.ಮೀಗಳಷ್ಟು ದೂರವಾಗಿತ್ತು. ನದಿಯ ನೀರು ಬತ್ತಿ ಸಂಗಮಸ್ಥಾನ ಬದಲಾಗಿತ್ತು. ೮ ಗಂಟೆಯ ಸುಮಾರಿಗೆ ಸಂಗಮಸ್ನಾನವನ್ನು ಮುಗಿಸಿ ಹಿಂದಿರುಗುತ್ತಿರುವಾಗ ಉತ್ತರಾದಿ ಮಠದ ಮುಖ್ಯಸ್ಥ ರಾಘವೇಂದ್ರ ಆಚಾರ್ ತಮ್ಮ ಮಾವನನ್ನು ತವೇರಾ ಗಾಡಿಗೆ ಹತ್ತಿಸುತ್ತಿದ್ದರು. ಕಾಶಿಯಲ್ಲಿ ವಾಸವಾಗಿದ್ದ, ೮೦ ವರ್ಷ ವಯಸ್ಸಿನ, ವಯೋಸಹಜ ಏಕಾಂತ ಹಾಗೂ ಮರೆವುಗಳಿಂದ ಬಳಲುತ್ತಿದ್ದ ಅವರ ಮಾವನನ್ನು ಹಿಂದಿನ ದಿನವಷ್ಟೇ ಭೇಟಿಯಾಗಿದ್ದೆ. ಮೂಲತಃ ಕರ್ನಾಟಕದವರಾಗಿದ್ದ ಅವರು ಸುಮಾರು ೬೦ ವರ್ಷಗಳ ಹಿಂದೆ ಕಾಶಿಗೆ ವಲಸೆ ಬಂದಿದ್ದರು. ಪ್ರಯಾಗದಲ್ಲಿದ್ದ ಮಗಳ ಮನೆಗೆ ಬಂದವರು ಕಾಶಿಗೆ ವಾಪಾಸಾಗುತ್ತಿದ್ದಾರೆ ಎಂದು ಅರಿವಾಯಿತು. ವಯಸ್ಸಾದ ಅತ್ತೆ ಮಾವಂದಿರು ಸುಖವಾಗಿ ಪ್ರಯಾಣಿಸಲಿ ಎಂದು ಬುಕ್ ಮಾಡಿದ್ದ ತವೇರಾ ಗಾಡಿಯಲ್ಲಿ ಹಿಂದಿನ ನಾಲ್ಕು ಸೀಟುಗಳು ಖಾಲಿ ಇರುವುದನ್ನು ಗಮನಿಸಿದೆ. "ಕಾಶಿಗೆ ಹೋಗುವುದೆಂದು ಹೊರಟಿದ್ದೆವು, ರೈಲು ತಡವಾಯಿತು." ಎಂದು ರಾಘವೇಂದ್ರ ಆಚಾರರ ಕಿವಿಯಲ್ಲಿ ಉಸುರಿದೆ. "ಹಿಂದೆ

ಖಾಲಿ ಜಾಗ ಇದೆ, ಇದೇ ಗಾಡಿಯಲ್ಲಿ ಹೋಗಿ ಬರಬಹುದು, ತನ್ನ ತಂದೆ ತಾಯಂದಿರೊಂದಿಗೆ ನನ್ನ ಹೆಂಡತಿಯೂ ಕಾಶಿಗೆ ಹೋಗುತ್ತಿದ್ದಾಳೆ. ತಂದೆ ತಾಯಿಯರನ್ನು ಅವರ ಮನೆಯಲ್ಲಿ ಬಿಟ್ಟು ಸಾಯಂಕಾಲ ೪.೩೦ ರ ವೇಳೆಗೆ ಇದೇ ಗಾಡಿಯಲ್ಲಿ ಕಾಶಿಯಿಂದ ಹೊರಡುತ್ತಾಳೆ. ನೀವು ದರ್ಶನ ಮಾಡಿ ಬರಬಹುದು" ಎಂದರು. ಗಾಡಿಯಲ್ಲಿ ಕಾಶಿಗೆ ಹೋಗುವುದಷ್ಟನ್ನೇ ಯೋಜಿಸಿದ್ದ ನನಗೆ ಡಬಲ್ ಧಮಾಕಾ ದೊರಕಿತು. ದಾರಿಯಲ್ಲಿ ರಾಘವೇಂದ್ರ ಆಚಾರ್ಯರ ಅತ್ತೆ ಕಾಶಿಯ ವಿವಿಧ ದೇವಾಲಯಗಳ ವೈಶಿಷ್ಟ್ಯ, ತಮ್ಮ ೭೦ ವರ್ಷಗಳ ಕಾಶೀ ಜೀವನ, ಕಾಶಿಯಲ್ಲಿರುವ ಕನ್ನಡಿಗರು ಮೊದಲಾದುವುಗಳನ್ನೆಲ್ಲ ಹರಟುತ್ತಿದ್ದರು. ಕಾಶಿಗೆ ತೆರಳಿ ವಿಶ್ವನಾಥನ ದರ್ಶನವೂ ಆಯಿತು. ರಾಘವೇಂದ್ರ ಆಚಾರ್ಯರ ಅತ್ತೆ ಸೂಚಿಸಿದಂತೆ ಕೇದಾರನಾಥ ಮಂದಿರಕ್ಕೂ ಭೇಟಿಯಿತ್ತೆವು. ಮಾಂಧಾತೃಮಹಾರಾಜ ಕೇದಾರನಾಥಕ್ಕೆ ಹೋಗಲು ಅಶಕ್ತನಾದಾಗ ಈ ಸ್ಥಳದಲ್ಲೇ ಹುಗ್ಗಿಯಲ್ಲಿ ಗೌರೀಶಂಕರರು ದರ್ಶನವಿತ್ತಿದ್ದರಂತೆ. ಕೇದಾರನಾಥಕ್ಕೆ ತೆರಳಲು ಅಶಕ್ತರಾದ ಭಕ್ತರು ಈ ಮಂದಿರವನ್ನು ಸಂದರ್ಶಿಸಿ ಧನ್ಯರಾಗುತ್ತಾರೆ. ಮಂದಿರದ ಪಕ್ಕದಲ್ಲೇ ಇರುವ ಹರಿಶ್ಚಂದ್ರ ಘಾಟ್ ನಲ್ಲಿ ಶವಸಂಸ್ಕಾರ ನಡೆಯುತ್ತಿರುತ್ತದೆ. ಇಲ್ಲಿ ವಿದ್ಯುತ್ ಚಿತೆಯನ್ನೂ ನಿರ್ಮಿಸಲಾಗಿದೆ. ಹೀಗೆ ಕಾಶಿಗೆ ಬಂದಾಗ ಪ್ರತಿ ಬಾರಿಯೂ ಹೊಸತನ್ನು ಕಾಣುತ್ತಿರುವುದಕ್ಕೆ ಆನಂದವಾಯಿತು. ಗಾಡಿಯನ್ನೇರಿ ಪ್ರಯಾಗಕ್ಕೆ ವಾಪಾಸ್ಸಾದೆವು. ಒಂದು ಬಾರಿ ಕಾಶಿಗೆ ಹೋಗುವುದು ರದ್ದಾದರೂ ಸಂಗಮಸ್ನಾನ ಮಾಡಿದ ನಂತರ ಅದೇ ದಿನ ವಿಶ್ವನಾಥನ ದರ್ಶನ ಪ್ರಾಪ್ತವಾದುದಕ್ಕೆ ವಿಶಿಷ್ಟವಾದ ಧನ್ಯತಾಭಾವವಿತ್ತು.

ಪರೀಕ್ಷೆಯ ದಿನಗಳು ಹತ್ತಿರವಾಗುತ್ತಿದ್ದಂತೆಯೇ ಸೆಖೆಯೂ ಹೆಚ್ಚುತ್ತಿತ್ತು. ಏಪ್ರಿಲ್ ೨೫ ರ ನಂತರ ಪರೀಕ್ಷೆಯ ಸಿದ್ದತೆಗೋಸ್ಕರ ರಜೆಯಿತ್ತು. ವಿದ್ಯಾವಾರಿಧಿಯ ಪ್ರವೇಶ ಪರೀಕ್ಷೆಯನ್ನು ಉತ್ತೀರ್ಣರಾಗಿ ಬಂದ ನಮಗೆ ಆರು ತಿಂಗಳ ಕೋರ್ಸ್ ವರ್ಕ್ ನ ಪರೀಕ್ಷೆ ಔಪಚಾರಿಕವಾಗಿತ್ತು. ಸೆಖೆಗೆ ನಮ್ಮ ರೂಮ್ ನಲ್ಲಿ ದಿನದ ೨೪ ಗಂಟೆಗಳನ್ನು ಕಳೆಯುವುದು ಕಷ್ಟಸಾಧ್ಯವಾಗಿತ್ತು. ೨೪ ಗಂಟೆ ಫ್ಯಾನ್ ತಿರುಗುತ್ತಿದ್ದರೂ ಕತ್ತಲೆಯ ಕೋಣೆಯಲ್ಲಿ ಫ್ಯಾನ್ ನ ಗಾಳಿಯಡಿಗೆ ಕುಳಿತುಕೊಂಡು ತಲೆ ಚಿಟ್ಟು ಹಿಡಿದಂತಾಗಿತ್ತು. ಆದ್ದರಿಂದ ನಾನು ಹಾಗೂ ರವಿಶಂಕರ ಪ್ರಯಾಗದಲ್ಲಿನ ಖುಸ್ರೋ ಬಾಗ್ ನೋಡಲು ಹೊರಟೆವು. ಖುಸ್ರೋ ಬಾಗ್ ಮೊಘಲ್ ದೊರೆ ಜಹಾಂಗೀರ್ ನಿರ್ಮಿಸಿದ್ದ ಉದ್ಯಾನವಾಗಿತ್ತು. ಉದ್ಯಾನದೊಳಗೆ ನಾಲ್ಕು ದೊಡ್ಡ ಗುಂಬಜ್ ಗಳಿದ್ದವು. ಸರಕಾರದಿಂದಲೂ ನಿರ್ಲಕ್ಷಿಸಲಾಗಿರುವ ಈ ಉದ್ಯಾನಕ್ಕೆ ಪ್ರವೇಶಶುಲ್ಕವಿರಲಿಲ್ಲ.

ಆದ್ದರಿಂದ ನಿರ್ವಹಣೆಯೂ ಅಚ್ಚುಕಟ್ಟಾಗಿರಲಿಲ್ಲ. ನಾಲ್ಕು ಗುಂಬಜ್ ಗಳಿಗೆ ಬೀಗ ಜಡಿದಿದ್ದರು. ವಿರಾಮದ ವೇಳೆಯನ್ನು ವಿಲಾಸದಿಂದ ಕಳೆಯಲು ಜಹಾಂಗೀರ್ ನಿರ್ಮಿಸಿದ್ದ ಈ ಗುಂಬಜ್ ಗಳ ಹೊರಭಾಗದಲ್ಲಿ ಜೋಡಿಹಕ್ಕಿಗಳಿಗಂತೂ ಕೊರತೆಯಿರಲಿಲ್ಲ. ಸುಮಾರು ಒಂದು ಗಂಟೆಯಷ್ಟು ಕಾಲ ಉದ್ಯಾನದಲ್ಲಿ ಸಮಯ ಕಳೆದು ಪುನಃ ರೂಮಿಗೆ ಮರಳಿದೆವು. ಮಾರನೆಯ ದಿನ ನಮ್ಮ ಬಿ.ಎಡ್ ತರಗತಿಯ ಸಹಪಾಠಿ ಪ್ರಭಾಕರನ ಮನೆಗೆ ಭೇಟಿಯಿತ್ತೆವು. ಪ್ರಯಾಗದಿಂದ ೪೦ ಕಿಮೀ ದೂರದ ಫೂಲ್ ಪುರದಲ್ಲಿರುವ ಪ್ರಭಾಕರನ ಮನೆಗೆ ಭೇಟಿಯಿತ್ತುದರಿಂದ ಸ್ಥಳೀಯ ಹಳ್ಳಿಯೊಂದರ ದರ್ಶನವೂ ಆಯಿತು. ಬಿಸಿಲು ಸುಡುತ್ತಿದ್ದರಿಂದ ಹೆಚ್ಚಿನ ತಿರುಗಾಟವನ್ನು ಮಾಡದೇ ಅವನು ಬಡಿಸಿದ ರೊಟ್ಟಿಗಳನ್ನು ತಿಂದು, ಬೇವಿನ ಮರದಡಿಯಲ್ಲಿ ಮಂಚದ ಮೇಲೆ ಮಲಗಿ, ಮಧ್ಯಾಹ್ನದ ನಂತರ ರೂಮಿಗೆ ಹಿಂದಿರುಗಿದೆವು.

ಪ್ರಯಾಗದ ಬಿಸಿಲಿನ ಝಳ ದಿನದಿಂದ ದಿನಕ್ಕೆ ಏರುತ್ತಾ ಹೋಗುತ್ತಿತ್ತು. ವಿಚಿತ್ರವೆಂದರೆ ನಮ್ಮ ಊರಿನಲ್ಲಿ ಬೆನ್ನಿನಿಂದ ಧಾರಾಕಾರವಾಗಿ ಬೆವರು ಸುರಿದರೆ ಪ್ರಯಾಗದಲ್ಲಿ ತಲೆಯಿಂದ ಸುರಿಯುವ ಬೆವರು ಮುಖವನ್ನಾವರಿಸಿಕೊಂಡು ನೆಲಕ್ಕೆ ಬೀಳುತ್ತಿತ್ತು. ಪರೀಕ್ಷೆಗಳೂ ಸಮೀಪಿಸಿದ್ದರಿಂದ ತಿರುಗಾಟಗಳನ್ನೆಲ್ಲ ಮುಗಿಸಿದೆವು. ಡಿಸೆಂಬರ್ ನಿಂದ ಪ್ರತಿದಿನವೂ ಆರಂಭಿಸಿದ್ದ ಗಂಗಾಸ್ನಾನ ಮೇ ೭ ನೆಯ ತಾರೀಕಿನಂದು ನೂರೆಂಟನೆಯ ದಿನವನ್ನು ತಲುಪಿತು. ಪರೀಕ್ಷೆಗಳು ೯ ನೆಯ ತಾರೀಕಿನಂದು ಮುಗಿಯುವುದರಿಂದ ಅದೇ ದಿನ ತತ್ಕಾಲ್ ಟಿಕೆಟ್ ಮಾಡಿಸಿಕೊಂಡು ಹೊರಡುವ ಯೋಜನೆಯನ್ನೂ ಹಾಕಿದ್ದೆವು. ಮೇ ೧೨ ರಂದು ನಡೆಯುವ ಕರ್ನಾಟಕ ವಿಧಾನಸಭಾ ಚುನಾವಣೆಯಲ್ಲಿ ಮತ ಚಲಾಯಿಸಬೇಕೆನ್ನುವುದು ಅವಸರಾವಸರವಾಗಿ ಹೊರಡಲು ಮುಖ್ಯ ಕಾರಣವಾಗಿತ್ತು. ನಾನು ಹಾಗೂ ರವಿಶಂಕರ ಹದಿನೈದು ದಿನಗಳ ಮೊದಲು ಊರಿಗೆ ತೆರಳಿದ್ದಾಗ ಲಗೇಜ್ ಗಳನ್ನು ಸಾಗಿಸಿದ್ದರಿಂದ ಲಗೇಜ್ ಗಳನ್ನು ಸಾಗಿಸುವ ಬಗೆಗೆ ಚಿಂತೆಯಿರಲಿಲ್ಲ. ಗಣೇಶನೂ ಹೈದರಾಬಾದ್ ಗೆ ತೆರಳಿದ್ದಾಗ ಹೆಚ್ಚುವರಿ ಲಗೇಜ್ ಗಳನ್ನು ಮಿತ್ರರ ಮೂಲಕ ಊರಿಗೆ ಸಾಗಿಸಿದ್ದ. ಹೀಗಾಗಿ ಪ್ರಯಾಗದಲ್ಲಿ ಆರು ತಿಂಗಳುಗಳ ಕಾಲ ಆರಾಮವಾಗಿ ಯಾವುದೇ ತೊಂದರೆಗಳಿಲ್ಲದೆ ದಿನ ಕಳೆದುದನ್ನು ಮೆಲುಕು ಹಾಕಲಾರಂಭಿಸಿದೆವು. ನನಗಂತೂ ಗಂಗಾಸ್ನಾನ, ಸಂಸ್ಕೃತಗಂಗಾದಲ್ಲಿನ ಅಧ್ಯಯನ, ಅನೇಕ ಕಡೆಗಳ ಪ್ರವಾಸ, ಪ್ರಯಾಗದ ಅನುಭವಗಳನ್ನು ಬರೆಯುವ ನನ್ನ ಸಂಕಲ್ಪಗಳು ಸಫಲವಾದ ತೃಪ್ತ ಭಾವವಿತ್ತು. ನಮ್ಮ ವಿಶ್ವವಿದ್ಯಾಲಯವಾದ ರಾಷ್ಟ್ರಿಯ ಸಂಸ್ಕೃತ

ಸಂಸ್ಥಾನ ಇಂತಹದೊಂದು ವಿಶಿಷ್ಟ ಅನುಭವವನ್ನು ಪಡೆಯುವ ಸದವಕಾಶವನ್ನು ಒದಗಿಸಿತ್ತು. ಊರಿನಿಂದ ೨೦೦೦ ಕಿಮೀ ದೂರದಲ್ಲಿ ವಾಸವಾಗಿರುವಾಗ ಕಹಿ ಅನುಭವಗಳೂ ಇರಲಿಲ್ಲವೆಂದೇನಲ್ಲ. ಇಂತಹ ಸಣ್ಣ ಸಣ್ಣ ಕಹಿ ಅನುಭವಗಳನ್ನು ಗಂಗಾಪ್ರವಾಹದಲ್ಲಿ ತೇಲಿಬಿಟ್ಟು, ಸಿಹಿ ಅನುಭವಗಳ ಮೂಟೆಯನ್ನು ಹೊತ್ತುಕೊಂಡು ಊರಿನ ರೈಲನ್ನೇರುವ ದಿನವನ್ನು ಎದುರು ನೋಡುತ್ತಿದ್ದೆವು.

ಆರಂಭ- ೦೭-೧೧-೨೦೧೭
ಮುಕ್ತಾಯ- ೦೭-೦೫-೨೦೧೮